KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**



| ಸಂಪುಟ ೧೪೩ | ಬೆಂಗಳೂರು, ಗುರುವಾರ, ಮಾರ್ಚ್ ೨೭, ೨೦೦೮ (ಚೈತ್ರ ೭, ಶಕ ವರ್ಷ ೧೯೨೯) | ಸಂಚಿಕೆ ೧೩ |
|---|---|---|



## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ನಿರ್ದೇಶಕರ ಕಾರ್ಯಾಲಯ, ಸರ್ಕಾರಿ ಕೇಂದ್ರ ಪುಸ್ತಕ ಮಳಿಗೆ, ಮೈಸೂರು ರಸ್ತೆ, ಬೆಂಗಳೂರು–560059**

**ಅಧಿಸೂಚನೆ**

2007–08ನೇ ಸಾಲಿನ ವಾರ್ಷಿಕ ಸರಕು ಪರಿಶೀಲನೆಯ ಪ್ರಯುಕ್ತ ಬೆಂಗಳೂರಿನಲ್ಲಿರುವ ಸರ್ಕಾರಿ ಕೇಂದ್ರ ಪುಸ್ತಕ ಮಳಿಗೆ ಮತ್ತು ಪುಸ್ತಕ ಮಾರಾಟ ಮಳಿಗೆ, ಬೆಂಗಳೂರು ಇಲ್ಲಿ ದಿನಾಂಕ:01.04.2008 ರಿಂದ 15.04.2008ರ ವರೆಗೆ ಸದರಿ ಪುಸ್ತಕ ಮಳಿಗೆಯಿಂದ ಅಥವಾ ಮಾರಾಟ ಮಳಿಗೆಯಿಂದ ಯಾವುದೇ ವ್ಯವಹಾರವನ್ನು ಮಾಡಲಾಗುವುದಿಲ್ಲವೆಂದು ಸಂಬಂಧಿಸಿದ ಸರ್ಕಾರಿ/ ಅರೆ ಸರ್ಕಾರಿ ಕಛೇರಿಗಳಿಗೆ ಮತ್ತು ಸಾರ್ವಜನಿಕರಿಗೆ ಈ ಮೂಲಕ ತಿಳಿಯಪಡಿಸಿದೆ.

**ಎಂ. ರವಿಶಂಕರ್**
ನಿರ್ದೇಶಕರು

**OFFICE OF THE DIRECTOR OF PRINTING STATIONARY AND PUBLICATION GOVERNMENT CENTRAL BOOK DEPOT, MYSORE ROAD, BANGALORE-560 059**

**NOTIFICATION**

It is hereby notified for the information of the all the Government/ Semi Government Offices and General public that there will be no transaction in the Government Central Book Depot and Sales Depot Bangalore from 01.04.2008 to 15.04.2008 (both days inclusive) on account of Annual Stock Verification for the year 2007-08.

**M. RAVISHANKAR**
Director

PR-323

**ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಪಸಂಮೀ 262 ಪಅಸೇ 2006, ಬೆಂಗಳೂರು, ದಿನಾಂಕ:4ನೇ ಜನವರಿ, 2008**

ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ಖಾಲಿ ಇರುವ ಸಹಾಯಕ ನಿರ್ದೇಶಕರು ಹುದ್ದೆಗೆ ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇರ ನೇಮಕಾತಿ ಮತ್ತು ಆಯ್ಕೆ) (ಸಾಮಾನ್ಯ)–2006 ನಿಯಮಗಳಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಗೊಂಡಿರುವ ಅನುಬಂಧ–1ರಲ್ಲಿ ಲಗತ್ತಿಸಿರುವ ಅಭ್ಯರ್ಥಿಗಳಿಗೆ ಅವರ ಹೆಸರಿನ ಮುಂದೆ ಕಾಣಿಸಿರುವ ಸ್ಥಳಕ್ಕೆ ಕರ್ನಾಟಕ ನಾಗರೀಕ ಸೇವಾ (ಪರಿಷ್ಕೃತ ವೇತನ) ನಿಯಮಗಳು–2007ರ ಹೊಸವೇತನ ಶ್ರೇಣಿ ರೂ.14050–350–14400–400–16800–450–19500–525–22650–600–25050 ರಲ್ಲಿ ಎರಡು ವರ್ಷಗಳ ಖಾಯಂ ಪೂರ್ವ ಸೇವಾವಧಿಗೆ ಒಳಪಟ್ಟು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೆ ಅನುಸಾರವಾಗಿ ನೇಮಕಾತಿ ಮಾಡಲಾಗಿದೆ.

ಷರತ್ತು ಮತ್ತು ನಿಬಂಧನೆಗಳು

(1) ಅಭ್ಯರ್ಥಿಗಳ ನೇಮಕಾತಿಯು ತಾತ್ಕಾಲಿಕವಾಗಿದ್ದು, ಅವರ ನೇಮಕಾತಿ ಹಾಗೂ ಸೇವಾ ಷರತ್ತುಗಳು ಆಗಿಂದಾಗ್ಗೆ ಜಾರಿಯಲ್ಲಿರುವ ಸರ್ಕಾರಿ ಆದೇಶಗಳು/ ಹೊರಡಿಸಲ್ಪಡುವ ನಿಯಮಾವಳಿಗಳ ಅಧೀನಕ್ಕೆ ಒಳಪಟ್ಟಿರುತ್ತದೆ.

(2) ನೇಮಕಾತಿ ಹೊಂದಿದ ಅಭ್ಯರ್ಥಿಗಳು ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಾವಳಿ ನಿಯಮ 1977ರಲ್ಲಿನ ನಿಯಮಗಳಿಗೆ ಬದ್ಧರಾಗಿರುತ್ತಾರೆ.

(3) ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡು ನೇಮಕಾತಿ ಹೊಂದಿರುವ ಅಭ್ಯರ್ಥಿಗಳ ನೇಮಕಾತಿಯು ಸಂಬಂಧಪಟ್ಟ ಜಿಲ್ಲಾ/ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು/ ತಹಶೀಲ್ದಾರ್ ಕಛೇರಿಯಿಂದ ನೀಡುವಂತಹ ಜಾತಿ/ ಸಿಂಧುತ್ವ ಪ್ರಮಾಣ ಪತ್ರದ ಆಧಾರದ ಮೇಲೆ ಖಚಿತತೆಗೆ ಒಳಪಟ್ಟಿರುತ್ತದೆ. ಒಂದು ವೇಳೆ ಮೀಸಲಾತಿ ಪಡೆದಿರುವುದು ಅಕ್ರಮವೆಂದು ಸಾಬೀತಾದರೆ ಅಂತಹ ಅಭ್ಯರ್ಥಿಯ ನೇಮಕಾತಿಯು ತಕ್ಷಣವೇ ರದ್ದುಗೊಳ್ಳುತ್ತದೆ ಹಾಗೂ ಅವರ ಮೇಲೆ ನಿಯಮಾವಳಿಗಳ ಪ್ರಕಾರ ಕಠಿಣ ಕಾನೂನು ಕ್ರಮ ಕೈಗೊಳ್ಳಲಾಗುತ್ತದೆ.

(4) ನೇಮಕಾತಿಗೊಂಡ ಅಭ್ಯರ್ಥಿಗಳು ಪರೀಕ್ಷಾರ್ಥ ಅವಧಿಯಲ್ಲಿ (Probationary Period) ಕರ್ನಾಟಕ ನಾಗರೀಕ ಸೇವಾ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆ) ನಿಯಮಾವಳಿ 1974ರನ್ವಯ ಸಹಾಯಕ ನಿರ್ದೇಶಕರ ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳು ಹಾಗೂ ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗತಕ್ಕದ್ದು.

(5) ಅಭ್ಯರ್ಥಿಗಳ ಜೇಷ್ಠತೆಯು ಕರ್ನಾಟಕ ನಾಗರೀಕ ಸೇವಾ (ಸೇವಾ ಹಿರಿತನ) ನಿಯಮಗಳು 1957ರಲ್ಲಿನ ನಿಯಮ-5ರನ್ವಯ ಹಾಗೂ ಕಾಲಕಾಲಕ್ಕೆ ಸರ್ಕಾರದಿಂದ ಹೊರಡಿಸುವ ಆದೇಶಗಳಿಗೆ ಒಳಪಟ್ಟಿರುತ್ತದೆ.

(6) ಅಭ್ಯರ್ಥಿಗಳು ನೇಮಕಾತಿ ಹೊಂದಿದ ಸ್ಥಳದಲ್ಲಿ ಕರ್ತವ್ಯಕ್ಕೆ ಹಾಜರಾಗುವ ಸಮಯದಲ್ಲಿ ಮೂಲ ಅಂಕಪಟ್ಟಿ, ಪದವಿ ಪ್ರಮಾಣ ಪತ್ರ, ಜನ್ಮ ದಿನಾಂಕ ದೃಢೀಕರಣ ಪತ್ರ/ ಎಸ್.ಎಸ್.ಎಲ್.ಸಿ. ಅಂಕಪಟ್ಟಿ ಮೀಸಲಾತಿ ಪ್ರಮಾಣ ಪತ್ರ ಹಾಗೂ ಇತರೆ ಮೂಲ ಪ್ರಮಾಣ ಪತ್ರಗಳನ್ನು ಪರಿಶೀಲನೆಗೆ ಹಾಜರುಪಡಿಸತಕ್ಕದ್ದು ಮತ್ತು ಇಬ್ಬರು ಗೌರವಾನ್ವಿತ ವ್ಯಕ್ತಿಗಳಿಂದ ಗುಣ-ನಡತೆ ಪ್ರಮಾಣ ಪತ್ರಗಳನ್ನು ಇತ್ತೀಚಿನ ಭಾವಚಿತ್ರಗಳೊಂದಿಗೆ ಒದಗಿಸತಕ್ಕದ್ದು.

(7) ಅಭ್ಯರ್ಥಿಗಳು ನೇಮಕಾತಿ ಆದೇಶವನ್ನು ಸ್ವೀಕರಿಸಿದ 15 ದಿನಗಳ ಒಳಗಾಗಿ ನೇಮಕಾತಿ ಹೊಂದಿದ ಸ್ಥಳದಲ್ಲಿನ ಸಂಬಂಧಪಟ್ಟ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ ಉಪನಿರ್ದೇಶಕರ ಸಮಕ್ಷಮದಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡು ಹಾಜರಾಗತಕ್ಕದ್ದು. 15 ದಿನಗಳ ಒಳಗಾಗಿ ಹಾಜರಾಗದಿದ್ದಲ್ಲಿ ನೇಮಕಾತಿ ಆದೇಶವು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 18(3) ರನ್ವಯ ಯಾವುದೇ ಮುನ್ಸೂಚನೆ ಇಲ್ಲದೇ ತಂತಾನೇ ರದ್ದಾಗುತ್ತದೆ.

(8) ಅಭ್ಯರ್ಥಿಗಳು ಸಂಬಂಧಪಟ್ಟ ಪಶುಪಾಲನಾ ಮತ್ತು ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ ಉಪನಿರ್ದೇಶಕರ ಸಮ್ಮುಖದಲ್ಲಿ ಕರ್ತವ್ಯಕ್ಕೆ ಹಾಜರಾಗುವ ಸಮಯದಲ್ಲಿ ರೂ.10-00 ಮೌಲ್ಯದ ಛಾಪಾ ಕಾಗದದಲ್ಲಿ (Document Sheet) ಅನುಬಂಧ-2ರಲ್ಲಿ ಲಗತ್ತಿಸಿರುವಂತೆ ವಚನಬದ್ಧ ಪ್ರಮಾಣ ಪತ್ರವನ್ನು ಬರೆದುಕೊಡತಕ್ಕದ್ದು.

(9) ನೇಮಕಾತಿ ಹೊಂದಿದ ಅಭ್ಯರ್ಥಿಗಳು, ನೇಮಕಾತಿ ಹೊಂದಿದ 15 ದಿನಗಳ ಒಳಗಾಗಿ ಸರ್ಕಾರಿ ವೈದ್ಯಾಧಿಕಾರಿಯಿಂದ (Licenced Government Medical Officer) ವೈದ್ಯಕೀಯ ದೃಢೀಕರಣ ಪತ್ರವನ್ನು ಪಡೆದು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಕೆ. ಶ್ರೀನಿವಾಸಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,
(ಪಶುಸಂಗೋಪನೆ)

**ಸರ್ಕಾರದ ಅಧಿಸೂಚನೆ ಸಂಖ್ಯೆ: ಪಸಂಮೀ 262 ಪಅಸೇ 2006, ದಿನಾಂಕ:04.01.2008ಕ್ಕೆ ಅನುಬಂಧ-1**

| ಕ್ರಮ ಸಂಖ್ಯೆ | ಅಭ್ಯರ್ಥಿಗಳ ಹೆಸರು | ಅಭ್ಯರ್ಥಿಯ ಅಂಚೆ ವಿಳಾಸ | ನೇಮಕಾತಿ ನೀಡಿ ನಿಯುಕ್ತಿಗೊಳಿಸಿರುವ ಸ್ಥಳ |
|---|---|---|---|
| 1 | 2 | 3 | 4 |
| 1) | ಡಾ: ರಮೇಶ್ ಕೆ.ಆರ್. | ಸಹಾಯಕ ಪ್ರಾಧ್ಯಾಪಕರು, ಕುಕ್ಕುಟ ವಿಜ್ಞಾನ ವಿಭಾಗ, ಪಶುವೈದ್ಯಕೀಯ ಕಾಲೇಜು, ಹೆಬ್ಬಾಳ, ಬೆಂಗಳೂರು-560 024. | ಸಹಾಯಕ ನಿರ್ದೇಶಕರು, ಉಪನಿರ್ದೇಶಕರ ಕಛೇರಿ, ವಿಶೇಷ ಜಾನುವಾರು ತಳಿ ಅಭಿವೃದ್ಧಿ ಯೋಜನೆ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ದಾವಣಗೆರೆ. |
| 2) | ಡಾ: ಮಮತಾ ಜಿ.ಎಸ್. | ಕೋಂ ಚಂದ್ರಾನಾಯಕ್ ಬಿ.ಎಂ. (ವಿಜ್ಞಾನಿ) ಪಶು ಆರೋಗ್ಯ ಮತ್ತು ಜೈವಿಕ ವಿಜ್ಞಾನ ಸಂಸ್ಥೆ, ಹೆಬ್ಬಾಳ, ಬೆಂಗಳೂರು-560 024. | ಸಹಾಯಕ ನಿರ್ದೇಶಕರು, ದೊಡ್ಡರೋಗ ನಿವಾರಣಾ ಯೋಜನೆ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಕಾರವಾರ. |

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಕೆ. ಶ್ರೀನಿವಾಸಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,
(ಪಶುಸಂಗೋಪನೆ)

## ಅನುಬಂಧ–2
## ವಚನಬದ್ಧ ಪ್ರಮಾಣ ಪತ್ರ

ಶ್ರೀಮತಿ/ ಶ್ರೀ.........................................................................................ಇವರ ಪುತ್ರ/ ಪುತ್ರಿಯಾದ ಡಾ:...........................................................................(ವಿಳಾಸದೊಂದಿಗೆ)..........................................................................

ನಾನು ಈ ಮೂಲಕ ಭಾರತದ ಸಂವಿಧಾನಕ್ಕೆ ಬದ್ಧನಾಗಿರುವುದಾಗಿ ಹಾಗೂ ಸರ್ಕಾರಿ ಸೇವೆಯನ್ನು ನಿಷ್ಠೆಯಿಂದ ಹಾಗೂ ಸೇವಾ ಮನೋಭಾವದಿಂದ ಮಾಡುವುದಾಗಿ ಪ್ರಮಾಣೀಕರಿಸುತ್ತೇನೆ. ಒಂದು ವೇಳೆ ಮೀಸಲಾತಿ ಪಡೆದಿರುವಲ್ಲಿ ಅಕ್ರಮವೆಂದು ಕಂಡುಬಂದಲ್ಲಿ ನಾನು ನನ್ನ ನೇಮಕಾತಿ ಆದೇಶವನ್ನು ಕಳೆದುಕೊಳ್ಳುವೆನು ಎಂಬುದನ್ನು ಮನಗಂಡು ಪ್ರಮಾಣೀಕರಿಸುತ್ತೇನೆ. ಇದರಲ್ಲಿ ಯಾವುದೇ ಲೋಪಗಳು ಕಂಡುಬಂದಲ್ಲಿ ಮುನ್ಸೂಚನೆಯಿಲ್ಲದೇ ಸೇವೆಯಿಂದ ತೆಗೆದುಹಾಕಲು ಯಾವುದೇ ಅಭ್ಯಂತರವಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ:

ದಿನಾಂಕ: (ಅಭ್ಯರ್ಥಿಯ ಹೆಸರು ಮತ್ತು ಸಹಿ)

ಸಾಕ್ಷಿಗಳು:

(1)

(2)

ಅಭ್ಯರ್ಥಿಯು ನನ್ನ ಸಮ್ಮುಖದಲ್ಲಿ ಪ್ರಮಾಣ ಮಾಡಿದ್ದಾರೆ ಮತ್ತು ರುಜುವನ್ನು ನಾನು ಗುರುತಿಸಿರುತ್ತೇನೆ.

ಸ್ಥಳ:

ದಿನಾಂಕ:

ಉಪನಿರ್ದೇಶಕರು,
ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ,
.................................ಜಿಲ್ಲೆ,
(ಹೆಸರು ಮತ್ತು ಮೊಹರು)

ಪಿ.ಆರ್.78

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ
## ಅಧಿಸೂಚನೆ

**ಸಂಖ್ಯೆ: ಮಮಇ 307 ಎಸ್‌ಜೆಡಿ 2006, ಬೆಂಗಳೂರು, ದಿನಾಂಕ:29ನೇ ಡಿಸೆಂಬರ್, 2007**

**ವಿಷಯ:** ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಜಂಟಿ ನಿರ್ದೇಶಕರ ವೃಂದದ ಅಧಿಕಾರಿಗಳ ದಿನಾಂಕ:01.01.2006 ರಲ್ಲಿರುವಂತೆ ಅಂತಿಮ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸುವ ಬಗ್ಗೆ.

**ಉಲ್ಲೇಖ:**1) ಸರ್ಕಾರದ ಅಧಿಸೂಚನೆ ಸಂಖ್ಯೆ: ಎಸ್‌ಡಬ್ಲ್ಯೂಎಲ್: 270: ಎಸ್‌ಜೆಡಿ:91 ದಿನಾಂಕ:28.07.1992.

2) ಸರ್ಕಾರದ ಅಧಿಸೂಚನೆ ಸಂಖ್ಯೆ: ಮಮಇ 307 ಎಸ್‌ಜೆಡಿ 2006 ದಿನಾಂಕ:04.09.2007.

3) ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರ ಪತ್ರಸಂಖ್ಯೆ: ನಿಮಮಅಇ/ ಜೇಷ್ಠತೆ/ ಜನಿ/ 13/ 06–07, ದಿನಾಂಕ:24.11.2007.

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಜಂಟಿ ನಿರ್ದೇಶಕರ ವೃಂದದ ಅಧಿಕಾರಿಗಳ ಅಂತಿಮ ಜೇಷ್ಠತಾ ಪಟ್ಟಿಯನ್ನು ದಿನಾಂಕ:01.01.1991 ರಲ್ಲಿದ್ದಂತೆ ಉಲ್ಲೇಖಿತ ಅಧಿಸೂಚನೆ ದಿನಾಂಕ:28.07.1992 ರಲ್ಲಿ ಪ್ರಕಟಿಸಲಾಗಿದೆ. ದಿನಾಂಕ:28.07.1992 ರಲ್ಲಿ ಪ್ರಕಟಿಸಿರುವ ಅಂತಿಮ ಜೇಷ್ಠತಾ ಪಟ್ಟಿಯಲ್ಲಿನ ಜಂಟಿ ನಿರ್ದೇಶಕರ ವೃಂದದ ಅಧಿಕಾರಿಗಳ ಜೇಷ್ಠತೆಯನ್ನು ಮುಂದುವರಿಸಿ ದಿನಾಂಕ:01.01.1991 ರ ನಂತರದಲ್ಲಿ ದಿನಾಂಕ:31.12.2005 ರವರೆಗಿನ ಅವಧಿಯಲ್ಲಿ ಆಗಿರುವ ಸ್ಥಾನಾಪನ್ನ ಮುಂಬಡ್ತಿಗಳನ್ನೊಳಗೊಂಡಂತೆ ಜಂಟಿ ನಿರ್ದೇಶಕರ ವೃಂದದ ಅಧಿಕಾರಿಗಳು ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತೆ) ನಿಯಮಗಳು 1957ರ ನಿಯಮ 10ರನ್ವಯ ತಯಾರಿಸಿ ಉಲ್ಲೇಖ (2)ರ ಸರ್ಕಾರದ ಅಧಿಸೂಚನೆ ದಿನಾಂಕ:04.09.2007ರಲ್ಲಿ ಪ್ರಕಟಿಸಿ, ಸದರಿ ಪಟ್ಟಿಯಲ್ಲಿ ನಿಗದಿಯಾಗಿರುವ/ ನಿಗದಿಯಾಗದಿರುವ ಸ್ಥಾನ, ಅರ್ಹತಾ ದಿನಾಂಕ ಹಾಗೂ ನಮೂದಿಸಲ್ಪಟ್ಟಿದ್ದ ಇನ್ನಿತರ ಸೇವಾ ವಿವರಗಳ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಅಂತಹವರು ತಮ್ಮ ನಿಲುವನ್ನು ಸಮರ್ಥಿಸುವಂತಹ ದಾಖಲೆಗಳೊಂದಿಗೆ ಲಿಖಿತ ಮೂಲಕ ಅಧಿಸೂಚನೆ ಪ್ರಕಟಿಸಲಾದ ದಿನಾಂಕದಿಂದ 30 ದಿನಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸಲು ಸೂಚಿಸಲಾಗಿತ್ತು.

ಈ ತಾತ್ಕಾಲಿಕ ಜೇಷ್ಠತಾ ಪಟ್ಟಿಗೆ ಶ್ರೀ ಎನ್.ಎಸ್. ಗಣಜಲಖೇಡ್, ನಿವೃತ್ತ ಪ್ರಾಜೆಕ್ಟ್ ಡೈರೆಕ್ಟರ್ (ಸ್ತ್ರೀಶಕ್ತಿ), ಪ್ರಧಾನ ಕಛೇರಿ, ಬೆಂಗಳೂರು, ಇವರು ಮಾತ್ರ ಆಕ್ಷೇಪಣೆಯನ್ನು ಸಲ್ಲಿಸಿದ್ದು, ಸದರಿ ಆಕ್ಷೇಪಣೆಯ ಬಗ್ಗೆ, ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರು ಉಲ್ಲೇಖ (3) ರಂತೆ ಇಲಾಖೆಯ ಅಭಿಪ್ರಾಯವನ್ನು ಸಲ್ಲಿಸಿದ್ದು, ನಿರ್ದೇಶಕರ ಅಭಿಪ್ರಾಯವನ್ನು ನಿಯಮಾನುಸಾರ ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿದ್ದು, ಶ್ರೀಯುತರ ಕೋರಿಕೆಯನ್ನು

ಒಪ್ಪಲು ಬರುವುದಿಲ್ಲವೆಂದು ನಿರ್ಧರಿಸಿದೆ. ಉಳಿದಂತೆ ತಾತ್ಕಾಲಿಕ ಜೇಷ್ಠತಾ ಪಟ್ಟಿಗೆ ಯಾವುದೇ ಆಕ್ಷೇಪಣೆಗಳು ಇಲ್ಲದಿರುವುದರಿಂದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಯಾವುದೇ ಬದಲಾವಣೆಯ ಅವಶ್ಯಕತೆ ಇಲ್ಲದಿರುವುದರಿಂದ ಸದರಿ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಅಂತಿಮ ಜೇಷ್ಠತಾ ಪಟ್ಟಿಯೆಂದು ಪ್ರಕಟಿಸಲು ಸರ್ಕಾರವು ನಿರ್ಧರಿಸಿದ, ಹಿನ್ನೆಲೆಯಲ್ಲಿ ಅಧಿಸೂಚನೆಯೊಂದಿಗಿನ ಅನುಬಂಧ–1 ರಲ್ಲಿ ಜಂಟಿ ನಿರ್ದೇಶಕರ ವೃಂದದ ಅಧಿಕಾರಿಗಳ ಅಂತಿಮ ಜೇಷ್ಠತಾ ಪಟ್ಟಿಯನ್ನು ಸಂಬಂಧಪಟ್ಟವರ ಮಾಹಿತಿಗಾಗಿ ಪ್ರಕಟಿಸಲಾಗಿದೆ. ಹಾಗೂ ನಿಯಮ 32ರಡಿ ಸ್ವತಂತ್ರ ಪ್ರಭಾರದಲ್ಲಿ ಮುಂದುವರೆದಿರುವ ಅಧಿಕಾರಿಗಳ ಪಟ್ಟಿಯನ್ನು ಸಹ ಅನುಬಂಧ–2ರಲ್ಲಿ ಮಾಹಿತಿಗಾಗಿ ಪ್ರಕಟಿಸಲಾಗಿದೆ.

ಭಾರತದ ರಾಷ್ಟ್ರಾಧ್ಯಕ್ಷರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಂ. ಚಂದ್ರಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಅನುಬಂಧ–1

### ಸರ್ಕಾರದ ಅಧಿಸೂಚನೆ ಸಂಖ್ಯೆ: ಮಮಇ 307 ಎಸ್‌ಜೆಡಿ 2006 ದಿನಾಂಕ:29.12.2007ಕ್ಕೆ ಅನುಬಂಧ

ದಿನಾಂಕ:01.01.2006 ರಲ್ಲಿದ್ದಂತೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಜಂಟಿ ನಿರ್ದೇಶಕರ ವೃಂದದ ಅಧಿಕಾರಿಗಳ ಅಂತಿಮ ಜೇಷ್ಠತಾ ಪಟ್ಟಿ.

| ಕ್ರ. ಸಂ. | ಅಧಿಕಾರಿಗಳ ಹೆಸರು ಶ್ರೀ:ಶ್ರೀಮತಿ | ನೇರ ನೇಮಕಾತಿ/ ಮುಂಬಡ್ತಿ ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ/ ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 1. | ನರಸಿಂಹಪ್ಪ ಎ.ಡಿ. | ಮುಂಬಡ್ತಿ | 24.03.40 | 30.04.71 | 17.11.90 | 17.11.90 | ನಿವೃತ್ತಿ |
| 2. | ತರೀನ್ ಜಡ್ ಎ. | ಮುಂಬಡ್ತಿ | 17.04.38 | 03.10.68 | 19.11.90 | 19.11.90 | ನಿವೃತ್ತಿ |
| 3. | ಪಾಟೀಲ್ ಬಿ.ಸಿ. | ಮುಂಬಡ್ತಿ | 02.05.34 | 01.06.60 | 05.12.91 | 05.12.91 | ನಿವೃತ್ತಿ |
| 4. | ಕೃಷ್ಣರಾಜು ವಿ. | ಮುಂಬಡ್ತಿ | 15.10.38 | 30.04.71 | 31.05.92 | 31.05.92 | ನಿವೃತ್ತಿ |
| 5. | ದೇವರತ್ನ ಎಂ.ವಿ. | ಮುಂಬಡ್ತಿ | 31.12.38 | 06.06.67 | 02.12.96 | 02.12.96 | ನಿವೃತ್ತಿ |
| 6. | ಬೋಜಮ್ಮ ಎಂ.ಡಿ. | ಮುಂಬಡ್ತಿ | 20.04.40 | 06.06.67 | 22.02.97 | 22.02.97 | ನಿವೃತ್ತಿ |
| 7. | ಶಂಕರನಾರಾಯಣರಾವ್ ಎಸ್.ವಿ. | ಮುಂಬಡ್ತಿ | 15.12.41 | 23.09.64 | 22.02.97 | 22.02.97 | ನಿವೃತ್ತಿ |
| 8. | ಬಾನು ಎಸ್.ಟಿ. | ಮುಂಬಡ್ತಿ | 03.02.48 | 17.07.70 | 10.08.99 | 10.08.99 | |
| 9. | ಗಣಜಲ್‌ಖೇಡ್ ಎನ್.ಎಸ್. | ಮುಂಬಡ್ತಿ | 08.07.43 | 06.06.67 | 02.06.01 | 02.06.01 | ನಿವೃತ್ತಿ |

**ಆರ್.ಎಂ. ಚಂದ್ರಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಅನುಬಂಧ–2

### ಸರ್ಕಾರದ ಅಧಿಸೂಚನೆ ಸಂಖ್ಯೆ: ಮಮಇ 307 ಎಸ್‌ಜೆಡಿ 2006 ದಿನಾಂಕ:29.12.2007ಕ್ಕೆ ಅನುಬಂಧ

ನಿಯಮ 32ರನ್ವಯ ಸ್ವತಂತ್ರ ಪ್ರಭಾರದಡಿ ಇದ್ದ ಮುಂದುವರೆದಿರುವ ಅಧಿಕಾರಿಗಳ ಪಟ್ಟಿ:

| ಕ್ರ. ಸಂ. | ಅಧಿಕಾರಿಗಳ ಹೆಸರು ಶ್ರೀ:ಶ್ರೀಮತಿ | ನೇರ ನೇಮಕಾತಿ/ ಮುಂಬಡ್ತಿ ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಸ್ವತಂತ್ರ ಪ್ರಭಾರದಲ್ಲಿಸಿದ ದಿನಾಂಕ | ಷರಾ |
|---|---|---|---|---|---|---|
| 1. | ಕಂಠಿ ಬಿ.ಪಿ. | ಮುಂಬಡ್ತಿ | 05.02.45 | 17.07.70 | 11.02.03 | ನಿವೃತ್ತಿ |
| 2. | ನುಸರತ್ ಫಾತಿಮ | ಮುಂಬಡ್ತಿ | 17.11.52 | 02.12.78 | 11.02.03 | |
| 3. | ರಂಗಸ್ವಾಮಯ್ಯ ಎಂ. | ಮುಂಬಡ್ತಿ | 12.09.46 | 17.12.70 | 29.03.03 | ನಿವೃತ್ತಿ |
| 4. | ಓಶಿಶರಣಪ್ಪ | ಮುಂಬಡ್ತಿ | 19.08.48 | 17.12.70 | 11.11.05 | ನಿವೃತ್ತಿ |
| 5. | ಬಿಂದು ಎಂ.ಎಂ. | ಮುಂಬಡ್ತಿ | 29.02.56 | 03.03.82 | 11.11.05 | |
| 6. | ಉಷಾ ಪಟವಾರಿ | ಮುಂಬಡ್ತಿ | 31.07.56 | 13.04.82 | 03.10.06 | |

**ಆರ್.ಎಂ. ಚಂದ್ರಮ್ಮ**
ಪಿ.ಆರ್.80
ಸರ್ಕಾರದ ಅಧೀನ ಕಾರ್ಯದರ್ಶಿ,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ
## ಅಧಿಸೂಚನೆ

**ಸಂಖ್ಯೆ: ಮಮಇ 308 ಎಸ್‌ಜೆಡಿ 2006, ಬೆಂಗಳೂರು, ದಿನಾಂಕ:29ನೇ ಡಿಸೆಂಬರ್, 2007**

**ವಿಷಯ:** ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಉಪ ನಿರ್ದೇಶಕರ ವೃಂದದ ಅಧಿಕಾರಿಗಳ ದಿನಾಂಕ:01.01.2006 ರಲ್ಲಿದ್ದಂತೆ ಅಂತಿಮ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸುವ ಬಗ್ಗೆ.

**ಉಲ್ಲೇಖ:**1) ಸರ್ಕಾರದ ಅಧಿಸೂಚನೆ ಸಂಖ್ಯೆ: ಎಸ್‌ಡಬ್ಲ್ಯೂಎಲ್: 266: ಎಸ್‌ಜೆಡಿ:91 ದಿನಾಂಕ:18/21.12.1992.

2) ಸರ್ಕಾರದ ಅಧಿಸೂಚನೆ ಸಂಖ್ಯೆ: ಮಮಇ 308 ಎಸ್‌ಜೆಡಿ 2006 ದಿನಾಂಕ:04.09.2007.

3) ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರ ಪತ್ರಸಂಖ್ಯೆ: ನಿಮಮಅಇ/ ಜೇಷ್ಠತೆ/ ಉನಿ/ 12/ 2006-07, ದಿನಾಂಕ:24.11.2007.

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಉಪ ನಿರ್ದೇಶಕರ ವೃಂದದ ಅಧಿಕಾರಿಗಳ ಅಂತಿಮ ಜೇಷ್ಠತಾ ಪಟ್ಟಿಯನ್ನು ದಿನಾಂಕ:01.01.1991 ರಲ್ಲಿದ್ದಂತೆ ಉಲ್ಲೇಖಿತ ಅಧಿಸೂಚನೆ ದಿನಾಂಕ:21.12.1992 ರಲ್ಲಿ ಪ್ರಕಟಿಸಲಾಗಿದೆ. ದಿನಾಂಕ:21.12.1992 ರಲ್ಲಿ ಪ್ರಕಟಿಸಿರುವ ಅಂತಿಮ ಜೇಷ್ಠತಾ ಪಟ್ಟಿಯಲ್ಲಿನ ಉಪನಿರ್ದೇಶಕರ ವೃಂದದ ಅಧಿಕಾರಿಗಳ ಜೇಷ್ಠತೆಯನ್ನು ಮುಂದುವರಿಸಿ ದಿನಾಂಕ:01.01.1991 ರ ನಂತರದಲ್ಲಿ ದಿನಾಂಕ:31.12.2005 ರವರೆಗಿನ ಅವಧಿಯಲ್ಲಿ ಆಗಿರುವ ಸ್ಥಾನಾಪನ್ನ ಮುಂಬಡ್ತಿಗಳನ್ನೊಳಗೊಂಡಂತೆ ಉಪ ನಿರ್ದೇಶಕರ ವೃಂದದ ಅಧಿಕಾರಿಗಳು ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತೆ) ನಿಯಮಗಳು 1957ರ ನಿಯಮ 10ರನ್ವಯ ತಯಾರಿಸಿ ಉಲ್ಲೇಖ (2)ರ ಸರ್ಕಾರದ ಅಧಿಸೂಚನೆ ದಿನಾಂಕ:04.09.2007ರಲ್ಲಿ ಪ್ರಕಟಿಸಿ, ಸದರಿ ಪಟ್ಟಿಯಲ್ಲಿ ನಿಗದಿಯಾಗಿರುವ/ ನಿಗದಿಯಾಗದಿರುವ ಸ್ಥಾನ, ಅರ್ಹತಾ ದಿನಾಂಕ ಹಾಗೂ ನಮೂದಿಸಲ್ಪಟ್ಟಿದ್ದ ಇನ್ನಿತರ ಸೇವಾ ವಿವರಗಳ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಅಂತಹವರು ತಮ್ಮ ನಿಲುವನ್ನು ಸಮರ್ಥಿಸುವಂತಹ ದಾಖಲೆಗಳೊಂದಿಗೆ ಲಿಖಿತ ಮೂಲಕ ಅಧಿಸೂಚನೆ ಪ್ರಕಟಿಸಲಾದ ದಿನಾಂಕದಿಂದ 30 ದಿನಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸಲು ಸೂಚಿಸಲಾಗಿತ್ತು.

ಈ ತಾತ್ಕಾಲಿಕ ಜೇಷ್ಠತಾ ಪಟ್ಟಿಗೆ ಸ್ವೀಕರಿಸಲ್ಪಟ್ಟಿರುವ ಆಕ್ಷೇಪಣೆಗಳಿಗೆ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರು ಉಲ್ಲೇಖ (3)ರಂತೆ ಇಲಾಖೆಯ ಅಭಿಪ್ರಾಯವನ್ನು ಸಲ್ಲಿಸಿರುತ್ತಾರೆ. ಆಕ್ಷೇಪಣೆಗಳ ಬಗ್ಗೆ ನಿರ್ದೇಶಕರು ಸಲ್ಲಿಸಿರುವ ಅಭಿಪ್ರಾಯವನ್ನು ನಿಯಮಾನುಸಾರ ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿದೆ. ಪರಿಗಣಿಸಲಾದಂತಹ ಆಕ್ಷೇಪಣೆಗಳಿಗನುಗುಣವಾಗಿ ಅವಶ್ಯವಿದ್ದೆಡೆಯಲ್ಲಿ ಸೂಕ್ತ ಮಾರ್ಪಾಡುಗಳನ್ನು ಅಳವಡಿಸಿಕೊಂಡು ಉಪನಿರ್ದೇಶಕರ ವೃಂದದ ಅಧಿಕಾರಿಗಳ ದಿನಾಂಕ:01.01.2006 ರಲ್ಲಿದ್ದಂತೆ ಅಂತಿಮ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಲು ಸರ್ಕಾರವು ನಿರ್ಧರಿಸಿದ ಹಿನ್ನೆಲೆಯಲ್ಲಿ, ಈ ಅಧಿಸೂಚನೆಯೊಂದಿಗಿನ ಅನುಬಂಧ-1 ರಲ್ಲಿ ಉಪನಿರ್ದೇಶಕರ ವೃಂದದ ಅಧಿಕಾರಿಗಳ ಜೇಷ್ಠತಾ ಪಟ್ಟಿಯನ್ನು ಹಾಗೂ ನಿಯಮ 32ರಡಿ ಸ್ವತಂತ್ರ ಪ್ರಭಾರದಲ್ಲಿ ಮುಂದುವರೆದಿರುವ ಅಧಿಕಾರಿಗಳ ಪಟ್ಟಿಯನ್ನು ಸಹ ಅನುಬಂಧ-2ರಲ್ಲಿ ಮಾಹಿತಿಗಾಗಿ ಪ್ರಕಟಿಸಲಾಗಿದೆ.

ಭಾರತದ ರಾಷ್ಟ್ರಾಧ್ಯಕ್ಷರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಂ. ಚಂದ್ರಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಅನುಬಂಧ-1

**ಸರ್ಕಾರದ ಅಧಿಸೂಚನೆ ಸಂಖ್ಯೆ: ಮಮಇ 308 ಎಸ್‌ಜೆಡಿ 2006 ದಿನಾಂಕ:29.12.2007ಕ್ಕೆ ಅನುಬಂಧ**

ದಿನಾಂಕ:01.01.2006 ರಲ್ಲಿದ್ದಂತೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಉಪನಿರ್ದೇಶಕರ ವೃಂದದ ಅಧಿಕಾರಿಗಳ ಅಂತಿಮ ಜೇಷ್ಠತಾ ಪಟ್ಟಿ.

| ಕ್ರ. ಸಂ. | ಅಧಿಕಾರಿಗಳ ಹೆಸರು ಶ್ರೀ:ಶ್ರೀಮತಿ | ನೇರ ನೇಮಕಾತಿ/ ಮುಂಬಡ್ತಿ ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ / ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. | ಕೃಷ್ಣರಾಜು ವಿ. | ಮುಂಬಡ್ತಿ | 15.10.38 | 30.04.71 | 22.12.82 | 15.10.85 | ಮುಂಬಡ್ತಿ |
| 2. | ರಾಜಶೇಖರ್ ಟಿ.ವಿ. | ಮುಂಬಡ್ತಿ | 05.09.34 | 01.06.60 | 17.11.90 | 01.05.86 | ನಿವೃತ್ತಿ |
| 3. | ಪಾಟೀಲ್ ಬಿ.ಸಿ. | ಮುಂಬಡ್ತಿ | 02.05.34 | 01.06.60 | 24.12.80 | 05.12.86 | ಮುಂಬಡ್ತಿ |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 4. | ಸಲೀಮುನ್ನೀಸಾ ಜಡ್ ಎ. | ಮುಂಬಡ್ತಿ | 10.05.36 | 23.09.64 | 17.11.90 | 17.11.90 | ನಿವೃತ್ತಿ |
| 5. | ದೇವರತ್ನ ಎಂ.ವಿ. | ಮುಂಬಡ್ತಿ | 31.12.38 | 06.06.67 | 25.05.92 | 25.05.92 | ಮುಂಬಡ್ತಿ |
| 6. | ಬೋಜಮ್ಮ ಎಂ.ಡಿ. | ಮುಂಬಡ್ತಿ | 20.04.40 | 06.06.67 | 25.05.92 | 25.05.92 | ಮುಂಬಡ್ತಿ |
| 7. | ಶಂಕರನಾರಾಯಣ ರಾವ್ ಎಸ್.ವಿ. | ಮುಂಬಡ್ತಿ | 15.12.41 | 23.09.64 | 25.06.92 | 25.05.92 | ಮುಂಬಡ್ತಿ |
| 8. | ಪಂಡಿತ್ ಜಿ.ಎಸ್. | ಮುಂಬಡ್ತಿ | 24.09.34 | – | 28.09.92 | 28.09.92 | ನಿವೃತ್ತಿ |
| 9. | ವಿಜಯ ಎಂ. | ಮುಂಬಡ್ತಿ | 07.09.39 | 06.06.67 | 23.06.95 | 23.06.95 | ನಿವೃತ್ತಿ |
| 10. | ಭಾನು ಎಸ್.ಟಿ. | ಮುಂಬಡ್ತಿ | 03.02.48 | 17.07.70 | 23.06.95 | 23.06.95 | ಮುಂಬಡ್ತಿ |
| 11. | ಗಣಜಲ್‌ಖೇಡ್ ಎನ್.ಎಸ್. | ಮುಂಬಡ್ತಿ | 08.07.43 | 06.06.67 | 07.08.99 | 07.08.99 | ಮುಂಬಡ್ತಿ |
| 12. | ನುಸರತ್ ಫಾತಿಮಾ | ಮುಂಬಡ್ತಿ | 17.11.52 | 02.12.78 | 07.08.99 | 07.08.99 | ಮುಂಬಡ್ತಿ |
| 13. | ಕಂಠಿ ಬಿ.ವಿ. | ಮುಂಬಡ್ತಿ | 05.02.45 | 17.07.70 | 07.08.99 | 07.08.99 | ಮುಂಬಡ್ತಿ |
| 14. | ರಂಗಧಾಮಯ್ಯ ಟಿ. | ಮುಂಬಡ್ತಿ | 07.02.43 | 17.07.70 | 07.08.99 | 07.08.99 | ನಿವೃತ್ತಿ |
| 15. | ಪಾಲಾಕ್ಷಪ್ಪ ಪೂಜಾರ್ | ಮುಂಬಡ್ತಿ | 11.05.43 | 17.12.70 | 07.08.99 | 07.08.99 | ನಿವೃತ್ತಿ |
| 16. | ರಂಗಸ್ವಾಮಯ್ಯ ಎಂ. | ಮುಂಬಡ್ತಿ | 12.09.46 | 17.12.70 | 07.08.99 | 07.08.99 | ಮುಂಬಡ್ತಿ |
| 17. | ಓತಿಶರಣಪ್ಪ | ಮುಂಬಡ್ತಿ | 19.08.48 | 17.12.70 | 16.06.01 | 16.06.01 | ಮುಂಬಡ್ತಿ |
| 18. | ಸಬ್ದತ್‌ಖಾನ್ ಎಂ.ಆರ್. | ಮುಂಬಡ್ತಿ | 01.06.45 | 12.06.69 | 16.06.01 | 16.06.01 | ನಿವೃತ್ತಿ |
| 19. | ರಂಗಸ್ವಾಮಿ ಎಂ. (ಪ.ಜಾ.) | ಮುಂಬಡ್ತಿ | 05.06.43 | 02.04.73 | 16.06.01 | 16.06.01 | ನಿವೃತ್ತಿ |
| 20. | ಬಿಂದು ಎಂ.ಎಂ. | ಮುಂಬಡ್ತಿ | 29.02.56 | 03.03.82 | 04.07.01 | 04.07.01 | ಮುಂಬಡ್ತಿ |
| 21. | ಉಷಾ ಪಟ್ವಾರಿ | ಮುಂಬಡ್ತಿ | 31.07.56 | 13.04.82 | 04.08.01 | 04.08.01 | |

ಆರ್.ಎಂ. ಚಂದ್ರಮ್ಮ
ಸರ್ಕಾರದ ಅಧೀನ ಕಾರ್ಯದರ್ಶಿ,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಅನುಬಂಧ–2

## ಸರ್ಕಾರದ ಅಧಿಸೂಚನೆ ಸಂಖ್ಯೆ: ಮಮಇ 308 ಎಸ್‌ಜೆಡಿ 2006 ದಿನಾಂಕ:29.12.2007ಕ್ಕೆ ಅನುಬಂಧ

ನಿಯಮ 32ರಡಿ ಸ್ವತಂತ್ರ ಪ್ರಭಾರದಡಿ ಇದ್ದ ಮುಂದುವರೆದಿರುವ ಅಧಿಕಾರಿಗಳ ಪಟ್ಟಿ:

| ಕ್ರ. ಸಂ. | ಅಧಿಕಾರಿಗಳ ಹೆಸರು ಶ್ರೀ:ಶ್ರೀಮತಿ | ನೇರ ನೇಮಕಾತಿ/ ಮುಂಬಡ್ತಿ ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಸ್ವತಂತ್ರ ಪ್ರಭಾರದಲ್ಲಿಸಿದ ದಿನಾಂಕ | ಷರಾ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ಬಸವರಾಜು ಯು. | ಮುಂಬಡ್ತಿ | 01.06.56 | 27.02.82 | 28.06.02 | |
| 2. | ಶಶಿಕಲಾ ಯು ಶೆಟ್ಟಿ | ಮುಂಬಡ್ತಿ | 23.04.57 | 27.02.82 | 27.12.03 | |
| 3. | ಮಾಲತಿ ಎಸ್. ಪೋಳ್ | ಮುಂಬಡ್ತಿ | 07.06.53 | 27.02.82 | 03.06.02 | |
| 4. | ಮುನಿರೆಡ್ಡಿ ಎನ್ | ಮುಂಬಡ್ತಿ | 02.01.55 | 27.02.82 | 27.12.03 | |
| 5. | ಶಹರ್ ಬಾನು | ಮುಂಬಡ್ತಿ | 25.05.53 | 27.02.82 | 28.06.02 | |
| 6. | ಜಯಸ್ವಾಮಿ ಎಂ.ಎಸ್. | ಮುಂಬಡ್ತಿ | 29.11.57 | 27.02.82 | 28.06.02 | |
| 7. | ಶಿವಶಂಕರ್ ಹೆಚ್.ಪಿ. | ಮುಂಬಡ್ತಿ | 25.04.53 | 27.02.82 | 11.02.03 | |
| 8. | ಕೆ. ಗೋಪಾಲಕೃಷ್ಣ | ಮುಂಬಡ್ತಿ | 18.06.53 | 27.02.82 | 11.02.03 | |
| 9. | ದೊರೈಸ್ವಾಮಿ ವಿ. | ಮುಂಬಡ್ತಿ | 24.04.55 | 27.02.82 | 11.02.03 | |
| 10. | ವಿಜಯ್ ಎನ್.ಆರ್. | ಮುಂಬಡ್ತಿ | 02.12.55 | 27.02.82 | 11.02.03 | |
| 11. | ಕೃಷ್ಣಪ್ಪ ವೈ. | ಮುಂಬಡ್ತಿ | 08.12.51 | 27.02.82 | 11.02.03 | ನಿಧನ |

| 1 | 2 | 3 | 4 | 5 | 6 | 7 |
|---|---|---|---|---|---|---|
| 12. | ಯೇಸುಪುತ್ರಮ್ಮ | ಮುಂಬಡ್ತಿ | 06.06.51 | 27.02.82 | 11.02.03 | |
| 13. | ಚಿದಾನಂದ ಹೆಚ್.ಸಿ. | ಮುಂಬಡ್ತಿ | 05.09.54 | 27.02.82 | 11.02.03 | |
| 14. | ಚಂದ್ರಶೇಖರಯ್ಯ ಹೆಚ್.ಸಿ. | ಮುಂಬಡ್ತಿ | 19.02.56 | 27.02.82 | 11.02.03 | |
| 15. | ರಮೇಶ್ ಪಿ. ಭರಸ್ಕಳೆ (ಪ.ಜಾ.) | ಮುಂಬಡ್ತಿ | 19.02.55 | 27.02.82 | 11.02.03 | |
| 16. | ಗೆಟ್ರೂಡ್ ವೇಗಸ್ | ಮುಂಬಡ್ತಿ | 27.12.56 | 27.02.82 | 11.02.03 | |
| 17. | ಪ್ರೇಮಕುಮಾರಿ ಎಂ.ಎನ್. | ಮುಂಬಡ್ತಿ | 21.05.58 | 09.06.82 | 11.02.03 | |
| 18. | ರಮೇಶ್ ಎಸ್. ಹಾಲಭಾವಿ | ಮುಂಬಡ್ತಿ | 24.08.55 | 09.06.82 | 11.02.03 | |
| 19. | ರಾಧಾಕೃಷ್ಣ ಎಂ. | ಮುಂಬಡ್ತಿ | 31.12.55 | 09.06.82 | 11.02.03 | |
| 20. | ನಂದೂರ್ ಬಿ.ಎಂ. | ಮುಂಬಡ್ತಿ | 01.01.46 | 09.06.82 | 11.02.03 | ನಿವೃತ್ತಿ |
| 21. | ಓಬಳಪ್ಪ ಕೆ.ಹೆಚ್. (ಪ.ಪಂ.) | ಮುಂಬಡ್ತಿ | 18.08.55 | 06.03.85 | 28.06.02 | |
| 22. | ಲಮಾಣಿ ಆರ್.ಜಿ. (ಪ.ಜಾ.) | ಮುಂಬಡ್ತಿ | 01.02.49 | 09.06.82 | 11.02.03 | |
| 23. | ವಾಸುದೇವ್ ವಿ. | ಮುಂಬಡ್ತಿ | 01.01.56 | 09.06.82 | 11.02.03 | |
| 24. | ದಾಸಪ್ಪ ಹೆಚ್.ಕೆ. | ಮುಂಬಡ್ತಿ | 28.05.53 | 09.06.82 | 11.02.03 | |
| 25. | ವಿಮಲ ಬಿ. | ಮುಂಬಡ್ತಿ | 25.11.53 | 09.06.82 | 11.02.03 | |
| 26. | ಪ್ರಭಾವತಿ ಕರ್ನಿಂಗ್ | ಮುಂಬಡ್ತಿ | 08.07.56 | 09.06.82 | 26.04.03 | |
| 27. | ಪ್ರೇಮಕುಮಾರಿ ಸಿ. (ಪ.ಜಾ.) | ಮುಂಬಡ್ತಿ | 18.12.48 | 12.09.75 | 08.09.03 | |
| 28. | ಕನಕಾಂಬುಜ | ಮುಂಬಡ್ತಿ | 05.09.48 | 30.09.80 | 28.02.02 | |

**ಆರ್.ಎಂ. ಚಂದ್ರಮ್ಮ**

ಪಿ.ಆರ್.81

ಸರ್ಕಾರದ ಅಧೀನ ಕಾರ್ಯದರ್ಶಿ,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ನಗರಾಭಿವೃದ್ಧಿ ಇಲಾಖೆ
## ಅಧಿಸೂಚನೆ

**ಸಂಖ್ಯೆ: ನಅಇ: 363: ಮೈಅಪ್ರಾ: 2007, ಬೆಂಗಳೂರು, ದಿನಾಂಕ:29ನೇ ಫೆಬ್ರವರಿ, 2008**

ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರ ಕಾಯ್ದೆ 1987ರ ಕಲಂ 19(1) ಮತ್ತು ಕರ್ನಾಟಕ ಭೂಸ್ವಾಧೀನ ಕಾಯ್ದೆ 1894ರ ಕಲಂ 48(1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ ಅಧಿನಿಯಮ 1(91)ರನ್ವಯ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ನಾಚನಹಳ್ಳಿ 3ನೇ ಹಂತ ಬಡಾವಣೆಯ ಉದ್ದೇಶಕ್ಕಾಗಿ ಈ ಕೆಳಕಂಡ ಅನುಸೂಚಿಯಡಿಯಲ್ಲಿ ವಿವರಿಸಿರುವ ವಿಸ್ತೀರ್ಣದ ಜಮೀನನ್ನು ಭೂಸ್ವಾಧೀನಪಡಿಸಿಕೊಳ್ಳಲು ಅಧಿಸೂಚನೆ ಸಂಖ್ಯೆ: ಹೆಚ್.ಯು.ಡಿ. 73 ಎಂ.ಐ.ಜೆ. 98 ದಿನಾಂಕ:21.04.1998ರಲ್ಲಿ ಅಂತಿಮ ಪ್ರಕಟಣೆ ಹೊರಡಿಸಲಾಗಿದೆ. ಈ ಜಮೀನುಗಳ ಪೈಕಿ ಅನುಸೂಚಿಯಲ್ಲಿ ಸೂಚಿಸಿರುವ ಜಮೀನನ್ನು ಈ ಕೆಳಕಂಡ ಷರತ್ತುಗಳ ಪಟ್ಟಿ ಭೂಸ್ವಾಧೀನ ಕ್ರಮದಿಂದ ಕೈಬಿಡಲಾಗಿದೆ.

ಸದರಿ ಜಮೀನಿನಲ್ಲಿ ಕಟ್ಟಡವನ್ನು ಕಟ್ಟಲು ಭೂ ಮಾಲೀಕರು ಇಚ್ಛಿಸಿದಲ್ಲಿ ಸ್ಥಳೀಯ ಪ್ರಾಧಿಕಾರದಿಂದ ಅನುಮೋದನೆ ಪಡೆಯತಕ್ಕದ್ದು.

**ಅನುಸೂಚಿ**

**ಜಿಲ್ಲೆ: ಮೈಸೂರು ತಾಲ್ಲೂಕು: ಮೈಸೂರು ಗ್ರಾಮ: ಕುಪ್ಪಲೂರು**

| ಕ್ರ. ಸಂ. | ಸರ್ವೆ ನಂ. | ಖಾತೆದಾರರ: ಅನುಭವದಾರರ ಹೆಸರು | ಖುಷ್ಕಿ ಎ.ಗುಂ. | ಭಾಗಾಯ್ತು ಎ.ಗುಂ. | ಖರಾಬು ಎ.ಗುಂ. | ಜುಮ್ಲಾ ಎ.ಗುಂ. | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | ಭೂಸ್ವಾಧೀನದಿಂದ ಕೈಬಿಟ್ಟಿರುವ ವಿಸ್ತೀರ್ಣ ಎಕರೆ:ಗುಂಟೆ |
|---|---|---|---|---|---|---|---|---|---|---|---|
| 1. | 44:1 | ಮರಸಿದ್ಧಯ್ಯ ಬಿನ್ ಬುಳ್ಳ ಉರುಫ್ ಸಿದ್ಧ | 0–34 | – | – | 0–34 | ಸರ್ಕಾರಿ ರಸ್ತೆ | ಸ.ನಂ. 43:1ರ ಪ್ರಾಧಿಕಾರದ ಜಮೀನು | ಸ.ನಂ. 44:2ರ ಪ್ರಾಧಿಕಾರದ ಜಮೀನು | ಪ್ರಾಧಿಕಾರದ | 0–34 |

ಭಾರತ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಟಿ. ನಾರಾಯಣಸ್ವಾಮಿ**

ಪಿ.ಆರ್.382

ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

## ನಗರಾಭಿವೃದ್ಧಿ ಇಲಾಖೆ
## ಅಧಿಸೂಚನೆ
### ಸಂಖ್ಯೆ: ನಅಇ: 259: ಮೈಅಪ್ರಾ: 2007, ಬೆಂಗಳೂರು, ದಿನಾಂಕ:4ನೇ ಮಾರ್ಚ್, 2008

ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರ ಕಾಯ್ದೆ 1987ರ ಕಲಂ 19(1) ಮತ್ತು ಕರ್ನಾಟಕ ಭೂಸ್ವಾಧೀನ ಕಾಯ್ದೆ 1894ರ ಕಲಂ 48(1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ ಅಧಿನಿಯಮ 1(91)ರನ್ವಯ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ನಾಚನಹಳ್ಳಿ 3ನೇ ಹಂತ ಬಡಾವಣೆಯ ಉದ್ದೇಶಕ್ಕಾಗಿ ಈ ಕೆಳಕಂಡ ಅನುಸೂಚಿಯಡಿಯಲ್ಲಿ ವಿವರಿಸಿರುವ ವಿಸ್ತೀರ್ಣದ ಜಮೀನನ್ನು ಭೂಸ್ವಾಧೀನಪಡಿಸಿಕೊಳ್ಳಲು ಅಧಿಸೂಚನೆ ಸಂಖ್ಯೆ: ಹೆಚ್.ಯು.ಡಿ. 73 ಎಂ.ಐ.ಜೆ. 98 ದಿನಾಂಕ:21.04.1998ರಲ್ಲಿ ಅಂತಿಮ ಪ್ರಕಟಣೆ ಹೊರಡಿಸಲಾಗಿದೆ. ಈ ಜಮೀನುಗಳ ಪೈಕಿ ಅಧಿಸೂಚಿಯಲ್ಲಿ ಸೂಚಿಸಿರುವ ಜಮೀನನ್ನು ಈ ಕೆಳಕಂಡ ಷರತ್ತುಗಳ ಪಟ್ಟಿ ಭೂಸ್ವಾಧೀನ ಕ್ರಮದಿಂದ ಕೈಬಿಡಲಾಗಿದೆ.

ಸದರಿ ಜಮೀನಿನಲ್ಲಿ ಕಟ್ಟಡವನ್ನು ಕಟ್ಟಲು ಭೂ ಮಾಲೀಕರು ಇಚ್ಛಿಸಿದಲ್ಲಿ ಸ್ಥಳೀಯ ಪ್ರಾಧಿಕಾರದಿಂದ ಅನುಮೋದನೆ ಪಡೆಯತಕ್ಕದ್ದು.

ಅನುಸೂಚಿ

ಜಿಲ್ಲೆ: ಮೈಸೂರು ತಾಲ್ಲೂಕು: ಮೈಸೂರು ಗ್ರಾಮ: ಕುಪ್ಪಲೂರು

| ಕ್ರ. ಸಂ. | ಸರ್ವೆ ನಂ. | ಖಾತೆದಾರರ: ಅನುಭವದಾರರ ಹೆಸರು | ಖುಷ್ಕಿ ಎ.ಗುಂ. | ಭಾಗಾಯ್ತು ಎ.ಗುಂ. | ಖರಾಬು ಎ.ಗುಂ. | ಜುಮ್ಲಾ ಎ.ಗುಂ. | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | ಭೂಸ್ವಾಧೀನದಿಂದ ಕೈಬಿಟ್ಟಿರುವ ವಿಸ್ತೀರ್ಣ ಎಕರೆ:ಗುಂಟೆ |
|---|---|---|---|---|---|---|---|---|---|---|---|
| 1. | 53:1 | ಭುಜಂಗಪ್ಪ, ಸಿದ್ಧಪ್ಪ, ಮಹಾದೇವಮ್ಮ | 0–11 | – | – | 0–11 | ಸ.ನಂ.53:1ರ ಪ್ರಾಧಿಕಾರದ ಜಮೀನು | ಸ.ನಂ. 53:1ರ ಪ್ರಾಧಿಕಾರದ ಜಮೀನು | ರಸ್ತೆ | ರಸ್ತೆ | 0–11 |

ಭಾರತ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಟಿ. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಪಿ.ಆರ್.383

## ಒಳಾಡಳಿತ ಇಲಾಖೆ
## ಅಧಿಕೃತ ಜ್ಞಾಪನ
### ನಂ.ಒಇ 122 ಕಸೈಸೇ 2007, ಬೆಂಗಳೂರು, ದಿನಾಂಕ:20ನೇ ಫೆಬ್ರವರಿ, 2008

**ವಿಷಯ:** ಮಾಜಿ ಸೈನಿಕರಿಗೆ ಕಲ್ಯಾಣ ಕಾರ್ಯಕ್ರಮಗಳು ಹಾಗೂ ಯೋಜನೆಗಳನ್ನು ಅನುಷ್ಠಾನಗೊಳಿಸಲು ಸಮನ್ವಯ ಅಧಿಕಾರಿ (ನೋಡಲ್ ಆಫೀಸರ್) ಗಳನ್ನು ನೇಮಿಸುವ ಬಗ್ಗೆ.

**ಉಲ್ಲೇಖ:**1) ಸರ್ಕಾರಿ ಆದೇಶ ಸಂಖ್ಯೆ: ಒಇ 122 ಕಸೈಸೇ 2007 ದಿನಾಂಕ:10.01.2007.

2) ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 63 ಇಆಸು 2007 (ಭಾ), ದಿನಾಂಕ:08.02.2007.

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ (1)ರ ಸರ್ಕಾರಿ ಆದೇಶದನ್ವಯ ಮತ್ತು ಉಲ್ಲೇಖಿತ (2)ರ ಅನಧಿಕೃತ ಟಿಪ್ಪಣಿಯಲ್ಲಿ ಕೋರಿದಂತೆ, ಈ ಕೆಳಗೆ ಕಾಣಿಸಿರುವ ಅಧಿಕಾರಿಯನ್ನು ಒಳಾಡಳಿತ ಇಲಾಖೆಗೆ ಸಂಬಂಧಿಸಿದಂತೆ ಮಾಜಿ ಸೈನಿಕರಿಗೆ ಕಲ್ಯಾಣ ಕಾರ್ಯಕ್ರಮಗಳು ಹಾಗೂ ಯೋಜನೆಗಳನ್ನು ಅನುಷ್ಠಾನಗೊಳಿಸಲು ಈ ಕೆಳಗೆ ಕಾಣಿಸಿರುವ ಅಧಿಕಾರಿಯನ್ನು ಸಮನ್ವಯ ಅಧಿಕಾರಿ (ನೋಡಲ್ ಆಫೀಸರ್)ಯನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ನೇಮಕ ಮಾಡಲಾಗಿದೆ.

ಶ್ರೀ ಇನಾಯತ್ ಉಲ್ಲಾ ಖಾನ್
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಪೊಲೀಸ್ ಸಹಾಯಕ ಸೇವೆಗಳು)
ನಂ.234, 2ನೇ ಮಹಡಿ, ವಿಧಾನಸೌಧ, ಬೆಂಗಳೂರು–560 001.
(ದೂರವಾಣಿ ಸಂಖ್ಯೆ: 22033500)

**ಎಲ್. ಷಣ್ಮುಖ**
ಸರ್ಕಾರದ ಉಪ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ)

ಪಿ.ಆರ್.238

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಕೃತ ಜ್ಞಾಪನ

**ನಂ. ಎಲ್.ಎನ್.ಡಿ.(ಎನ್.ಎ) ಸಿ.ಆರ್:193: 07–08, ಬೆಂಗಳೂರು, ದಿನಾಂಕ:22ನೇ ಜನವರಿ, 2008**

**ವಿಷಯ:** ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಸಾದೇನಹಳ್ಳಿ ಗ್ರಾಮದ, ಸ.ನಂ.24 ರಲ್ಲಿ 10.00 ಎಕರೆ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಪತ್ರದ ಸಂಖ್ಯೆ: ಆರ್.ಡಿ.265 ಎಲ್.ಜಿ.ಬಿ. 2007 (ಭಾಗ–6) ದಿನಾಂಕ:18.10.2007.

2) ತಹಶೀಲ್ದಾರ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕು ರವರ ಪತ್ರದ ಸಂಖ್ಯೆ: ಎಲ್.ಎನ್.ಡಿ: (ಎನ್.ಎ.) ಸಿ.ಆರ್:450:07–08, ದಿನಾಂಕ:22.10.2007.

3) ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ ರವರ ಪತ್ರದ ಸಂಖ್ಯೆ: ಬೆಂಮಸಾಸಂ: ಕೇಕ: ವಾಣಿಜ್ಯ: ಆಸ್ತಿ: 2435/ 07–08, ದಿನಾಂಕ:09.01.2008.

ಬೆಂಗಳೂರು ಜಿಲ್ಲೆ ವ್ಯಾಪ್ತಿಯಲ್ಲಿ ಇತ್ತೀಚೆಗೆ ಸರ್ಕಾರಿ ಜಮೀನುಗಳ ಮೇಲಿನ ಅತಿಕ್ರಮಣ/ ಒತ್ತುವರಿಯನ್ನು ಸರ್ವೆ ಮಾಡಿ ಪತ್ತೆ ಹಚ್ಚಿದ್ದು, ಅತಿಕ್ರಮಣಕಾರರಿಂದ ಈ ತಹಲ್‌ವರೆಗೆ ಖುಲ್ಲಾ ಪಡಿಸಲಾಗಿರುವ 3313–28 ಎಕರೆಗಳಲ್ಲಿ ವಿವಿಧ ಸಾರ್ವಜನಿಕ/ ಸಾರ್ವಜನಿಕ ಬೆಳವಣಿಗೆ ಉದ್ದೇಶಗಳಿಗೆ ಅಗತ್ಯವಾಗಿರುವ ಹಿನ್ನಲೆಯಲ್ಲಿ ಸಂಬಂಧಪಟ್ಟ ವಿವಿಧ ಸರ್ಕಾರಿ ಸಂಸ್ಥೆಗಳಿಗೆ ಮಂಜೂರಾತಿ ಮಾಡುವ ಸರ್ಕಾರದ ನಿರ್ಧಾರದ ಹಿನ್ನಲೆಯಲ್ಲಿ ಉಲ್ಲೇಖ (1)ರಲ್ಲಿನ ಸರ್ಕಾರದ ಪತ್ರದ ಸಂಖ್ಯೆ: ಆರ್.ಡಿ. 265: ಎಲ್.ಜಿ.ಬಿ. 2007, (ಭಾಗ–6), ಬೆಂಗಳೂರು ದಿನಾಂಕ:18.10.2007ರ ಆದೇಶದಲ್ಲಿ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಸಾದೇನಹಳ್ಳಿ ಗ್ರಾಮದ, ಸ.ನಂ.24ರಲ್ಲಿ 10.00 ಎಕರೆ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಬೆಲೆ ನಿಗದಿಪಡಿಸಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ನಿಯಮ 20(1)(ಸಿ) ಅನ್ವಯ ಮಂಜೂರಾತಿ ಮಾಡಲು ಸರ್ಕಾರ ತನ್ನ ಅನುಮತಿ ನೀಡಿರುತ್ತದೆ.

ಸರ್ಕಾರದ ಪೂರ್ವಾನುಮೋದನೆಯಂತೆ, ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆರವರಿಗೆ ಜಮೀನಿನ ಕಿಮ್ಮತ್ತು ಮತ್ತು ಇತರೆ ಶುಲ್ಕವನ್ನು ಸೇರಿ ಒಟ್ಟು ರೂ.1,27,42,455–00 (ಒಂದು ಕೋಟಿ ಇಪ್ಪತ್ತೇಳು ಲಕ್ಷದ ನವಲತ್ತೆರಡು ಸಾವಿರದ ನಾಲ್ಕುನೂರ ಐವತ್ತೈದು ರೂ.ಗಳು ಮಾತ್ರ) ಗಳನ್ನು ಪಾವತಿಸಲು ಈ ಪ್ರಾಧಿಕಾರದಿಂದ ದಿನಾಂಕ:13.11.2007ರಂದು ತಿಳುವಳಿಕೆ ನೀಡಲಾಗಿತ್ತು. ಅದರಂತೆ ಮೇಲ್ಕಂಡ ಸಂಸ್ಥೆಯವರು ಸರ್ಕಾರಕ್ಕೆ, ಚಲನ್ ನಂ.151219, 151220, 151218, ದಿನಾಂಕ:07.01.2008ರಲ್ಲಿ ಹಣವನ್ನು ಸಂದಾಯ ಮಾಡಿ, ಮೂಲ ಚಲನ್ ಹಾಜರುಪಡಿಸಿದ್ದು ಭೂ ಮಂಜೂರಾತಿ ಆದೇಶವನ್ನು ನೀಡಬೇಕೆಂದು ಉಲ್ಲೇಖ (3) ರ ಪತ್ರದಲ್ಲಿ ಕೋರಿರುತ್ತಾರೆ.

ಉಲ್ಲೇಖ (1)ರ ಸರ್ಕಾರದ ಆದೇಶದಂತೆ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಸಾದೇನಹಳ್ಳಿ ಗ್ರಾಮದ ಸ.ನಂ.24ರಲ್ಲಿ 10.00 ಎಕರೆ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 20(1) (ಸಿ) ರನ್ವಯ ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಭೂ ಮಂಜೂರಾತಿ ಆದೇಶವನ್ನು ನೀಡಲಾಗಿದೆ.

### ಷರತ್ತುಗಳು

1) ಈ ಜಮೀನಿನ ಮಂಜೂರಾತಿಯು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿರುತ್ತದೆ.
2) ಮಂಜೂರು ಮಾಡಲಾದ ಜಮೀನನ್ನು ಮಂಜೂರಾತಿ ಉದ್ದೇಶಕ್ಕೆ 2 ವರ್ಷದ ಒಳಗಾಗಿ ಉಪಯೋಗಿಸಿ ಕೊಳ್ಳತಕ್ಕದ್ದು.
3) ಈ ಭೂಮಿಯಲ್ಲಿ ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಏನನ್ನೂ ಮಾಡತಕ್ಕದ್ದಲ್ಲ.
4) ಸಂಸ್ಥೆಗೆ ಮಂಜೂರಾದ ಭೂಮಿಯನ್ನು ಬೇರೆ ಯಾರಿಗೂ ಗುತ್ತಿಗೆಗೆ ಕೊಡತಕ್ಕದ್ದಲ್ಲ ಅಥವಾ ಪರಭಾರೆ ಮಾಡತಕ್ಕದ್ದಲ್ಲ. ಆದರೆ ಈ ಜಮೀನನ್ನು ಯಾವುದೇ ಬ್ಯಾಂಕ್/ ಸಹಕಾರ ಸಂಘಗಳಿಗೆ ಅಭಿವೃದ್ಧಿ ಕಾಮಗಾರಿಗಳಿಗಾಗಿ ಸಾಲ ಪಡೆಯಲು ಆಧಾರ ಮಾಡಲು ಅನುಮತಿ ನೀಡಲಾಗಿದೆ. ಆದರೆ ಸಾಲ ತೀರುವಳಿಗಾಗಿ ಈ ಜಮೀನನ್ನು ಬ್ಯಾಂಕ್/ ಸಂಸ್ಥೆ ಮತ್ತು ಪ್ರಾಧಿಕಾರ ಮುಟ್ಟು ಹಾಕಿಕೊಳ್ಳಲು ಹಕ್ಕು ಇರುವುದಿಲ್ಲ.
5) ಯಾವ ಉದ್ದೇಶಕ್ಕಾಗಿ ಮಂಜೂರಾತಿ ಮಾಡಲಾಗಿದೆಯೋ ಅದರ ಹೊರತು ಇತರೇ ಯಾವುದೇ ಉದ್ದೇಶಕ್ಕೆ ಈ ಜಮೀನನ್ನು ಉಪಯೋಗಿಸತಕ್ಕದ್ದಲ್ಲ.
6) ಮಂಜೂರಾತಿ ಸಂಸ್ಥೆಯು ನಿಗದಿತ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕ ಇತ್ಯಾದಿಗಳನ್ನು ಸರ್ಕಾರಕ್ಕೆ ಪಾವತಿಸಿ ಸಂಬಂಧಪಟ್ಟ ಉಪನೋಂದಣಾಧಿಕಾರಿ ಕಛೇರಿಯಲ್ಲಿ ನೋಂದಣಿಯನ್ನು ಮಾಡಿಸಿಕೊಳ್ಳತಕ್ಕದ್ದು.
7) ಈ ಮಂಜೂರಾತಿಯು ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.

8) ಈ ಸರ್ಕಾರಿ ಭೂಮಿ ಅಥವಾ ಭೂಮಿಯ ಒಂದು ಭಾಗವು ಯಾವುದೇ ಸಾರ್ವಜನಿಕ ಉದ್ದೇಶಕ್ಕಾಗಿ ಅಗತ್ಯವಾಗಿದ್ದರೆ ಮೂರು ತಿಂಗಳ ನೋಟೀಸನ್ನು ಕೊಟ್ಟು ತರುವಾಯ ಹಿಂತೆಗೆದುಕೊಳ್ಳಲಾಗುವುದು. ಈ ರೀತಿ ಸರ್ಕಾರದ ವಶಕ್ಕೆ ಪಡೆದ ಜಮೀನಿನಲ್ಲಿ ಯಾವುದೇ ಪರಿಹಾರವನ್ನು ಪಡೆಯಲು ಅರ್ಹರಾಗುವುದಿಲ್ಲ.

9) ಸದರಿ ಜಮೀನಿನಲ್ಲಿ ಅಭಿವೃದ್ಧಿ ಕೆಲಸ ಇತ್ಯಾದಿಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಸಂಬಂಧಪಟ್ಟ ಪ್ರಾಧಿಕಾರಗಳಿಂದ ಕಾನೂನು ರೀತ್ಯ ಪೂರ್ವಾನುಮೋದನೆ ಪಡೆದು ಕಾಮಗಾರಿ ಪ್ರಾರಂಭಿಸಬೇಕು.

10) ಶಾಸನಬದ್ಧ ಕಾಯ್ದೆಗಳ ಕಟ್ಟು ಪಾಡುಗಳನ್ನು ಪಾಲಿಸದೇ ಇದ್ದಲ್ಲಿ ಅಥವಾ ಮೇಲ್ಕಂಡ ಯಾವುದೇ ಷರತ್ತುಗಳಿಗೆ ವಿರುದ್ಧವಾಗಿ ನಡೆದಲ್ಲಿ ಜಮೀನಿನ ಮಂಜೂರಾತಿಯನ್ನು ವಜಾ ಮಾಡಲಾಗುವುದು.

11) ಪ್ರಶ್ನಿತ ಜಮೀನಿನಲ್ಲಿ ಸಿಗುವ ಬೆಲೆಬಾಳುವ ನಿಧಿ, ನಿಕ್ಷೇಪ ಇತ್ಯಾದಿಗಳನ್ನು ಸರ್ಕಾರಕ್ಕೆ ಸೇರಿದ್ದಾಗಿರುತ್ತದೆ.

12) ಸದರಿ ಸಂಸ್ಥೆಗೆ ಈ ಜಮೀನು ಅವಶ್ಯಕವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.

13) ಅರ್ಜಿತ ಸಂಸ್ಥೆಯು ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ 1969 ರ ನಿಯಮ 28(2)ರಡಿಯಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ಕರಾರುಪತ್ರವನ್ನು ಬರೆದುಕೊಡತಕ್ಕದ್ದು.

ಮೇಲ್ಕಂಡ ಯಾವುದೇ ಷರತ್ತು ಉಲ್ಲಂಘನೆಯಾದಲ್ಲಿ, ಈ ಭೂ ಮಂಜೂರಾತಿಯು ತನಗೆ ತಾನಾಗಿ ರದ್ದುಗೊಳ್ಳುತ್ತದೆ ಮತ್ತು ಅರ್ಜಿತ ಸಂಸ್ಥೆಗೆ ಯಾವುದೇ ತರಹದ ನಷ್ಟ ಉಂಟಾದಲ್ಲಿ ಸರ್ಕಾರವು ಇದಕ್ಕೆ ಜವಾಬ್ದಾರಿಯಾಗುವುದಿಲ್ಲ.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್.157

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಧಿಕೃತ ಜ್ಞಾಪನ

**ನಂ. ಎಲ್.ಎನ್.ಡಿ.(ಎನ್.ಎ) ಸಿ.ಆರ್:198: 07–08, ಬೆಂಗಳೂರು, ದಿನಾಂಕ:22ನೇ ಜನವರಿ, 2008**

**ವಿಷಯ:** ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಜಾಲ ಹೋಬಳಿ, ಹುತ್ತನಹಳ್ಳಿ ಗ್ರಾಮದ, ಸ.ನಂ.148 ರಲ್ಲಿ 7.22 ಎಕರೆ:ಗುಂಟೆ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಪತ್ರದ ಸಂಖ್ಯೆ: ಆರ್.ಡಿ.265 ಎಲ್.ಜಿ.ಬಿ. 2007 (ಭಾಗ–6) ದಿನಾಂಕ:18.10.2007.

2) ತಹಶೀಲ್ದಾರ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕು ರವರ ಪತ್ರದ ಸಂಖ್ಯೆ: ಎಲ್.ಎನ್.ಡಿ: (ಎನ್.ಎ.) ಸಿ.ಆರ್:470:07–08, ದಿನಾಂಕ:22.10.2007.

3) ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ ರವರ ಪತ್ರದ ಸಂಖ್ಯೆ: ಬೆಂಮಸಾಸಂ: ಕೇಕ: ವಾಣಿಜ್ಯ: ಆಸ್ತಿ: 2287/ 07–08, ದಿನಾಂಕ:24.12.2007.

ಬೆಂಗಳೂರು ಜಿಲ್ಲೆ ವ್ಯಾಪ್ತಿಯಲ್ಲಿ ಇತ್ತೀಚೆಗೆ ಸರ್ಕಾರಿ ಜಮೀನುಗಳ ಮೇಲಿನ ಅತಿಕ್ರಮಣ/ ಒತ್ತುವರಿಯನ್ನು ಸರ್ವೆ ಮಾಡಿ ಪತ್ತೆ ಹಚ್ಚಿದ್ದು, ಅತಿಕ್ರಮಣಕಾರರಿಂದ ಈ ತಹಲ್‌ವರೆಗೆ ಖುಲ್ಲಾ ಪಡಿಸಲಾಗಿರುವ 3313–28 ಎಕರೆಗಳಲ್ಲಿ ವಿವಿಧ ಸಾರ್ವಜನಿಕ/ ಸಾರ್ವಜನಿಕ ಬೆಳವಣಿಗೆ ಉದ್ದೇಶಗಳಿಗೆ ಅಗತ್ಯವಾಗಿರುವ ಹಿನ್ನಲೆಯಲ್ಲಿ ಸಂಬಂಧಪಟ್ಟ ವಿವಿಧ ಸರ್ಕಾರಿ ಸಂಸ್ಥೆಗಳಿಗೆ ಮಂಜೂರಾತಿ ಮಾಡುವ ಸರ್ಕಾರದ ನಿರ್ಧಾರದ ಹಿನ್ನಲೆಯಲ್ಲಿ ಉಲ್ಲೇಖ (1)ರಲ್ಲಿನ ಸರ್ಕಾರದ ಪತ್ರದ ಸಂಖ್ಯೆ: ಆರ್.ಡಿ. 265: ಎಲ್.ಜಿ.ಬಿ. 2007, (ಭಾಗ–6), ಬೆಂಗಳೂರು ದಿನಾಂಕ:18.10.2007ರ ಆದೇಶದಲ್ಲಿ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಜಾಲ ಹೋಬಳಿ, ಹುತ್ತನಹಳ್ಳಿ ಗ್ರಾಮದ, ಸ.ನಂ.148ರಲ್ಲಿ 7.22 ಎಕರೆ:ಗುಂಟೆ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಬೆಲೆ ನಿಗದಿಪಡಿಸಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ನಿಯಮ 20(1)(ಸಿ) ಅನ್ವಯ ಮಂಜೂರಾತಿ ಮಾಡಲು ಸರ್ಕಾರ ತನ್ನ ಅನುಮತಿ ನೀಡಿರುತ್ತದೆ.

ಸರ್ಕಾರದ ಪೂರ್ವಾನುಮೋದನೆಯಂತೆ, ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆರವರಿಗೆ ಜಮೀನಿನ ಕಿಮ್ಮತ್ತು ಮತ್ತು ಇತರೆ ಶುಲ್ಕವನ್ನು ಸೇರಿ ಒಟ್ಟು ರೂ.2,62,30,567–00 (ಎರಡು ಕೋಟಿ ಅರವತ್ತೆರಡು ಲಕ್ಷದ ಮೂವತ್ತು ಸಾವಿರದ ಐದುನೂರ ಅರವತ್ತೇಳು ರೂ.ಗಳು ಮಾತ್ರ) ಗಳನ್ನು ಪಾವತಿಸಲು ಈ ಪ್ರಾಧಿಕಾರದಿಂದ ದಿನಾಂಕ:13.11.2007ರಂದು ತಿಳುವಳಿಕೆ ನೀಡಲಾಗಿತ್ತು. ಅದರಂತೆ ಮೇಲ್ಕಂಡ ಸಂಸ್ಥೆಯವರು ಸರ್ಕಾರಕ್ಕೆ, ಚಲನ್ ನಂ. 643513, 643515, 643517, ದಿನಾಂಕ:18.12.2007ರಲ್ಲಿ ಹಣವನ್ನು ಸಂದಾಯ ಮಾಡಿ, ಮೂಲ ಚಲನ್ ಹಾಜರುಪಡಿಸಿದ್ದು ಭೂ ಮಂಜೂರಾತಿ ಆದೇಶವನ್ನು ನೀಡಬೇಕೆಂದು ಉಲ್ಲೇಖ (3) ರ ಪತ್ರದಲ್ಲಿ ಕೋರಿರುತ್ತಾರೆ.

ಉಲ್ಲೇಖ (1)ರ ಸರ್ಕಾರದ ಆದೇಶದಂತೆ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಜಾಲ ಹೋಬಳಿ, ಹುತ್ತನಹಳ್ಳಿ ಗ್ರಾಮದ ಸ.ನಂ.148ರಲ್ಲಿ 7.22 ಎಕರೆ:ಗುಂಟೆ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 20(1) (ಸಿ) ರನ್ವಯ ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಭೂ ಮಂಜೂರಾತಿ ಆದೇಶವನ್ನು ನೀಡಲಾಗಿದೆ.

ಷರತ್ತುಗಳು

1) ಈ ಜಮೀನಿನ ಮಂಜೂರಾತಿಯು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿರುತ್ತದೆ.
2) ಮಂಜೂರು ಮಾಡಲಾದ ಜಮೀನನ್ನು ಮಂಜೂರಾತಿ ಉದ್ದೇಶಕ್ಕೆ 2 ವರ್ಷದ ಒಳಗಾಗಿ ಉಪಯೋಗಿಸಿ ಕೊಳ್ಳತಕ್ಕದ್ದು.
3) ಈ ಭೂಮಿಯಲ್ಲಿ ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಏನನ್ನೂ ಮಾಡತಕ್ಕದ್ದಲ್ಲ.
4) ಸಂಸ್ಥೆಗೆ ಮಂಜೂರಾದ ಭೂಮಿಯನ್ನು ಬೇರೆ ಯಾರಿಗೂ ಗುತ್ತಿಗೆಗೆ ಕೊಡತಕ್ಕದ್ದಲ್ಲ ಅಥವಾ ಪರಭಾರೆ ಮಾಡತಕ್ಕದ್ದಲ್ಲ. ಆದರೆ ಈ ಜಮೀನನ್ನು ಯಾವುದೇ ಬ್ಯಾಂಕ್/ ಸಹಕಾರ ಸಂಘಗಳಿಗೆ ಅಭಿವೃದ್ಧಿ ಕಾಮಗಾರಿಗಳಿಗಾಗಿ ಸಾಲ ಪಡೆಯಲು ಆಧಾರ ಮಾಡಲು ಅನುಮತಿ ನೀಡಲಾಗಿದೆ. ಆದರೆ ಸಾಲ ತೀರುವಳಿಗಾಗಿ ಈ ಜಮೀನನ್ನು ಬ್ಯಾಂಕ್/ ಸಂಸ್ಥೆ ಮತ್ತು ಪ್ರಾಧಿಕಾರ ಮುಟ್ಟು ಹಾಕಿಕೊಳ್ಳಲು ಹಕ್ಕು ಇರುವುದಿಲ್ಲ.
5) ಯಾವ ಉದ್ದೇಶಕ್ಕಾಗಿ ಮಂಜೂರಾತಿ ಮಾಡಲಾಗಿದೆಯೋ ಅದರ ಹೊರತು ಇತರೇ ಯಾವುದೇ ಉದ್ದೇಶಕ್ಕೆ ಈ ಜಮೀನನ್ನು ಉಪಯೋಗಿಸತಕ್ಕದ್ದಲ್ಲ.
6) ಮಂಜೂರಾತಿ ಸಂಸ್ಥೆಯು ನಿಗದಿತ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕ ಇತ್ಯಾದಿಗಳನ್ನು ಸರ್ಕಾರಕ್ಕೆ ಪಾವತಿಸಿ ಸಂಬಂಧಪಟ್ಟ ಉಪನೋಂದಣಾಧಿಕಾರಿ ಕಛೇರಿಯಲ್ಲಿ ನೋಂದಣಿಯನ್ನು ಮಾಡಿಸಿಕೊಳ್ಳತಕ್ಕದ್ದು.
7) ಈ ಮಂಜೂರಾತಿಯು ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
8) ಈ ಸರ್ಕಾರಿ ಭೂಮಿ ಅಥವಾ ಭೂಮಿಯ ಒಂದು ಭಾಗವು ಯಾವುದೇ ಸಾರ್ವಜನಿಕ ಉದ್ದೇಶಕ್ಕಾಗಿ ಅಗತ್ಯವಾಗಿದ್ದರೆ ಮೂರು ತಿಂಗಳ ನೋಟೀಸನ್ನು ಕೊಟ್ಟು ತರುವಾಯ ಹಿಂತೆಗೆದುಕೊಳ್ಳಲಾಗುವುದು. ಈ ರೀತಿ ಸರ್ಕಾರದ ವಶಕ್ಕೆ ಪಡೆದ ಜಮೀನಿನಲ್ಲಿ ಯಾವುದೇ ಪರಿಹಾರವನ್ನು ಪಡೆಯಲು ಅರ್ಹರಾಗುವುದಿಲ್ಲ.
9) ಸದರಿ ಜಮೀನಿನಲ್ಲಿ ಅಭಿವೃದ್ಧಿ ಕೆಲಸ ಇತ್ಯಾದಿಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಸಂಬಂಧಪಟ್ಟ ಪ್ರಾಧಿಕಾರಗಳಿಂದ ಕಾನೂನು ರೀತ್ಯ ಪೂರ್ವಾನುಮೋದನೆ ಪಡೆದು ಕಾಮಗಾರಿ ಪ್ರಾರಂಭಿಸಬೇಕು.
10) ಶಾಸನಬದ್ಧ ಕಾಯ್ದೆಗಳ ಕಟ್ಟು ಪಾಡುಗಳನ್ನು ಪಾಲಿಸದೇ ಇದ್ದಲ್ಲಿ ಅಥವಾ ಮೇಲ್ಕಂಡ ಯಾವುದೇ ಷರತ್ತುಗಳಿಗೆ ವಿರುದ್ಧವಾಗಿ ನಡೆದಲ್ಲಿ ಜಮೀನಿನ ಮಂಜೂರಾತಿಯನ್ನು ವಜಾ ಮಾಡಲಾಗುವುದು.
11) ಪ್ರಶ್ನಿತ ಜಮೀನಿನಲ್ಲಿ ಸಿಗುವ ಬೆಲೆಬಾಳುವ ನಿಧಿ, ನಿಕ್ಷೇಪ ಇತ್ಯಾದಿಗಳನ್ನು ಸರ್ಕಾರಕ್ಕೆ ಸೇರಿದ್ದಾಗಿರುತ್ತದೆ.
12) ಸದರಿ ಸಂಸ್ಥೆಗೆ ಈ ಜಮೀನು ಅವಶ್ಯಕವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.
13) ಅರ್ಜಿತ ಸಂಸ್ಥೆಯು ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ 1969 ರ ನಿಯಮ 28(2)ರಡಿಯಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ಕರಾರುಪತ್ರವನ್ನು ಬರೆದುಕೊಡತಕ್ಕದ್ದು.

ಮೇಲ್ಕಂಡ ಯಾವುದೇ ಷರತ್ತು ಉಲ್ಲಂಘನೆಯಾದಲ್ಲಿ, ಈ ಭೂ ಮಂಜೂರಾತಿಯು ತನಗೆ ತಾನಾಗಿ ರದ್ದುಗೊಳ್ಳುತ್ತದೆ ಮತ್ತು ಅರ್ಜಿತ ಸಂಸ್ಥೆಗೆ ಯಾವುದೇ ತರಹದ ನಷ್ಟ ಉಂಟಾದಲ್ಲಿ ಸರ್ಕಾರವು ಇದಕ್ಕೆ ಜವಾಬ್ದಾರಿಯಾಗುವುದಿಲ್ಲ.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್.158

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಧಿಕೃತ ಜ್ಞಾಪನ

**ನಂ. ಎಲ್.ಎನ್.ಡಿ.(ಎನ್.ಎ) ಸಿ.ಆರ್:46: 2006–07, ಬೆಂಗಳೂರು, ದಿನಾಂಕ:23ನೇ ಫೆಬ್ರವರಿ, 2008**

**ವಿಷಯ:** ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಹೆಸರಘಟ್ಟ ಗ್ರಾಮದಲ್ಲಿರುವ ಪಶುಸಂಗೋಪನಾ ಇಲಾಖೆಗೆ ಸೇರಿದ ಜಮೀನನ್ನು ಕರ್ನಾಟಕ ಹಾಲು ಉತ್ಪಾದಕರ ಮಹಾ ಮಂಡಳಿಗೆ ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಪತ್ರದ ಸಂಖ್ಯೆ: ಆರ್.ಡಿ.1230 ಎಲ್.ಜಿ.ಬಿ. 2007 ದಿನಾಂಕ:07.11.2007 ರಂತೆ.
2) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಸಹಕಾರಿ ಹಾಲು ಉತ್ಪಾದಕರ ಮಹಾ ಮಂಡಳಿ ನಿಯಮಿತರವರ ಪತ್ರಸಂಖ್ಯೆ: 28.05.2007, 20.11.2007 ಹಾಗೂ 10.01.2008ರಂತೆ.

ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಹೆಸರಘಟ್ಟ ಗ್ರಾಮದಲ್ಲಿರುವ ಪಶುಸಂಗೋಪನಾ ಇಲಾಖೆಗೆ ಸೇರಿದ ರೆಡ್‌ಡೇನ್ ಫಾರಂನಲ್ಲಿರುವ 100–00 ಎಕರೆ ಜಮೀನನ್ನು ಕರ್ನಾಟಕ ಹಾಲು ಉತ್ಪಾದಕರ ಮಹಾ ಮಂಡಳಿಯ ಅಭಿವೃದ್ಧಿ ಚಟುವಟಿಕೆಗಳಿಗೆ ಮಂಜೂರು ಮಾಡಲು ಉಲ್ಲೇಖ (2)ರ ಪತ್ರಗಳಲ್ಲಿ ಹಾಲು ಉತ್ಪಾದಕರ ಮಹಾ

ಮಂಡಳಿಯು ಕೋರಿದ್ದು ತತ್ಸಂಬಂಧವಾಗಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಲಾಗಿ ಸರ್ಕಾರವು ಉಲ್ಲೇಖ (1)ರ ಆದೇಶದಲ್ಲಿ ಮೇಲ್ಕಂಡ ರೆಡ್‌ಡೆನ್‌ನ ಪ್ರಾಜೆಕ್ಟ್‌ನಲ್ಲಿರುವ 100.00 ಎಕರೆ ಜಮೀನನ್ನು ಎಕರೆ ಒಂದಕ್ಕೆ 1.00 (ಒಂದು ಲಕ್ಷ) ಲಕ್ಷ ದಂತೆ ದರ ವಿಧಿಸಿ ಕರ್ನಾಟಕ ಹಾಲು ಉತ್ಪಾದಕರ ಮಹಾ ಮಂಡಳಿಗೆ ಮಂಜೂರಾತಿ ನೀಡಿರುತ್ತದೆ.

ಸರ್ಕಾರದ ಮಂಜೂರಾತಿ ಆದೇಶದಂತೆ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಹಾಲು ಉತ್ಪಾದಕರ ಮಹಾ ಮಂಡಳಿಯವರಿಗೆ ಜಮೀನಿನ ದರ 100.00 ಎಕರೆಗೆ 100.00 (ನೂರು ಲಕ್ಷ) ಲಕ್ಷ ಪಾವತಿಸಲು ಈ ಪ್ರಾಧಿಕಾರದಿಂದ ದಿನಾಂಕ:17.12.2007ರಂದು ತಿಳುವಳಿಕೆ ನೀಡಲಾಗಿತ್ತು. ಅದರಂತೆ ಮಂಡಳಿಯು ಚೆಕ್ ಸಂಖ್ಯೆ: 090418, ದಿನಾಂಕ:02.01.2008ರಲ್ಲಿ ಸರ್ಕಾರಕ್ಕೆ ಪಾವತಿಸಿ ಚಲನ್ ಹಾಜರು ಪಡಿಸಿ ಭೂ ಮಂಜೂರಾತಿ ಆದೇಶ ನೀಡಲು ಕೋರಿರುತ್ತಾರೆ.

ಆದ್ದರಿಂದ, ಉಲ್ಲೇಖ (1)ರ ಸರ್ಕಾರದ ಆದೇಶದಂತೆ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಹೆಸರಘಟ್ಟ ಗ್ರಾಮದಲ್ಲಿರುವ ಪಶುಸಂಗೋಪನಾ ಇಲಾಖೆಗೆ ಸೇರಿದ ರೆಡ್‌ಡೆನ್ ಫಾರಂನಲ್ಲಿರುವ 100.00 ಎಕರೆ ಜಮೀನನ್ನು ಕರ್ನಾಟಕ ಹಾಲು ಉತ್ಪಾದಕರ ಮಹಾ ಮಂಡಳಿಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 20(1) (ಸಿ) ರನ್ವಯ ಈ ಕೆಳಕಂಡ ಷರತ್ತಿಗೊಳಪಡಿಸಿ ಭೂ ಮಂಜೂರಾಗಿ ಆದೇಶವನ್ನು ನೀಡಲಾಗಿದೆ.

**ಷರತ್ತುಗಳು**

1) ಈ ಜಮೀನಿನ ಮಂಜೂರಾತಿಯು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿರುತ್ತದೆ.
2) ಮಂಜೂರು ಮಾಡಲಾದ ಜಮೀನನ್ನು ಮಂಜೂರಾತಿ ಉದ್ದೇಶಕ್ಕೆ 2 ವರ್ಷದ ಒಳಗಾಗಿ ಉಪಯೋಗಿಸಿ ಕೊಳ್ಳತಕ್ಕದ್ದು.
3) ಈ ಭೂಮಿಯಲ್ಲಿ ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಏನನ್ನೂ ಮಾಡತಕ್ಕದ್ದಲ್ಲ.
4) ಮಂಡಳಿಗೆ ಮಂಜೂರಾದ ಭೂಮಿಯನ್ನು ಬೇರೆ ಯಾರಿಗೂ ಗುತ್ತಿಗೆಗೆ ಕೊಡತಕ್ಕದ್ದಲ್ಲ ಅಥವಾ ಪರಭಾರೆ ಮಾಡತಕ್ಕದ್ದಲ್ಲ. ಆದರೆ ಈ ಜಮೀನನ್ನು ಯಾವುದೇ ಬ್ಯಾಂಕ್/ ಸಹಕಾರ ಸಂಘಗಳಿಗೆ ಅಭಿವೃದ್ಧಿ ಕಾಮಗಾರಿಗಳಿಗಾಗಿ ಸಾಲ ಪಡೆಯಲು ಆಧಾರ ಮಾಡಲು ಅನುಮತಿ ನೀಡಲಾಗಿದೆ. ಆದರೆ ಸಾಲ ತೀರುವಳಿಗಾಗಿ ಈ ಜಮೀನನ್ನು ಬ್ಯಾಂಕ್/ ಸಂಸ್ಥೆ ಮತ್ತು ಪ್ರಾಧಿಕಾರ ಮುಟ್ಟು ಹಾಕಿಕೊಳ್ಳಲು ಹಕ್ಕು ಇರುವುದಿಲ್ಲ.
5) ಯಾವ ಉದ್ದೇಶಕ್ಕಾಗಿ ಮಂಜೂರಾತಿ ಮಾಡಲಾಗಿದೆಯೋ ಅದರ ಹೊರತು ಇತರೇ ಯಾವುದೇ ಉದ್ದೇಶಕ್ಕೆ ಈ ಜಮೀನನ್ನು ಉಪಯೋಗಿಸತಕ್ಕದ್ದಲ್ಲ.
6) ಮಂಜೂರಾತಿ ಸಂಸ್ಥೆಯು ನಿಗದಿತ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕ ಇತ್ಯಾದಿಗಳನ್ನು ಸರ್ಕಾರಕ್ಕೆ ಪಾವತಿಸಿ ಸಂಬಂಧಪಟ್ಟ ಉಪನೋಂದಣಾಧಿಕಾರಿ ಕಛೇರಿಯಲ್ಲಿ ನೋಂದಣಿಯನ್ನು ಮಾಡಿಸಿಕೊಳ್ಳತಕ್ಕದ್ದು.
7) ಈ ಮಂಜೂರಾತಿಯು ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
8) ಈ ಸರ್ಕಾರಿ ಭೂಮಿ ಅಥವಾ ಭೂಮಿಯ ಒಂದು ಭಾಗವು ಯಾವುದೇ ಸಾರ್ವಜನಿಕ ಉದ್ದೇಶಕ್ಕಾಗಿ ಅಗತ್ಯವಾಗಿದ್ದರೆ ಮೂರು ತಿಂಗಳ ನೋಟೀಸನ್ನು ಕೊಟ್ಟು ತರುವಾಯ ಹಿಂತೆಗೆದುಕೊಳ್ಳಲಾಗುವುದು. ಈ ರೀತಿ ಸರ್ಕಾರದ ವಶಕ್ಕೆ ಪಡೆದ ಜಮೀನಿನಲ್ಲಿ ಯಾವುದೇ ಪರಿಹಾರವನ್ನು ಪಡೆಯಲು ಅರ್ಹರಾಗುವುದಿಲ್ಲ.
9) ಸದರಿ ಜಮೀನಿನಲ್ಲಿ ಅಭಿವೃದ್ಧಿ ಕೆಲಸ ಇತ್ಯಾದಿಗಳನ್ನು ಪ್ರಾರಂಭಿಸುವ ಮೂರ್ವದಲ್ಲಿ ಸಂಬಂಧಪಟ್ಟ ಪ್ರಾಧಿಕಾರಗಳಿಂದ ಕಾನೂನು ರೀತ್ಯ ಮೂರ್ವಾನುಮೋದನೆ ಪಡೆದು ಕಾಮಗಾರಿ ಪ್ರಾರಂಭಿಸಬೇಕು.
10) ಶಾಸನಬದ್ಧ ಕಾಯ್ದೆಗಳ ಕಟ್ಟು ಪಾಡುಗಳನ್ನು ಪಾಲಿಸದೇ ಇದ್ದಲ್ಲಿ ಅಥವಾ ಮೇಲ್ಕಂಡ ಯಾವುದೇ ಷರತ್ತುಗಳಿಗೆ ವಿರುದ್ಧವಾಗಿ ನಡೆದಲ್ಲಿ ಜಮೀನಿನ ಮಂಜೂರಾತಿಯನ್ನು ವಜಾ ಮಾಡಲಾಗುವುದು.
11) ಪ್ರಶ್ನಿತ ಜಮೀನಿನಲ್ಲಿ ಸಿಗುವ ಬೆಲೆಬಾಳುವ ನಿಧಿ, ನಿಕ್ಷೇಪ ಇತ್ಯಾದಿಗಳನ್ನು ಸರ್ಕಾರಕ್ಕೆ ಸೇರಿದ್ದಾಗಿರುತ್ತದೆ.
12) ಸದರಿ ಸಂಸ್ಥೆಗೆ ಈ ಜಮೀನು ಅವಶ್ಯಕವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.
13) ಅರ್ಜಿತ ಸಂಸ್ಥೆಯು ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ 1969 ರ ನಿಯಮ 28(2)ರಡಿಯಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ಕರಾರುಪತ್ರವನ್ನು ಬರೆದುಕೊಡತಕ್ಕದ್ದು.

ಮೇಲ್ಕಂಡ ಯಾವುದೇ ಷರತ್ತು ಉಲ್ಲಂಘನೆಯಾದಲ್ಲಿ, ಈ ಭೂ ಮಂಜೂರಾತಿಯು ತನಗೆ ತಾನಾಗಿ ರದ್ದುಗೊಳ್ಳುತ್ತದೆ ಮತ್ತು ಅರ್ಜಿತ ಸಂಸ್ಥೆಗೆ ಯಾವುದೇ ತರಹದ ನಷ್ಟ ಉಂಟಾದಲ್ಲಿ ಸರ್ಕಾರವು ಇದಕ್ಕೆ ಜವಾಬ್ದಾರಿಯಾಗುವುದಿಲ್ಲ.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್.243

## ಜಿಲ್ಲಾ ಪಂಚಾಯತ್, ತುಮಕೂರು
## ಸಾರ್ವಜನಿಕ ಶಿಕ್ಷಣ ಇಲಾಖೆ, ಉಪನಿರ್ದೇಶಕರ ಕಛೇರಿ, ತುಮಕೂರು (ದ), ತುಮಕೂರು
## ಜ್ಞಾಪನಾ

**ಸಂಖ್ಯೆ: ಇ5 ಅ.ಗೈ.ಹಾ 59/ 2004-05/ 6190, ದಿನಾಂಕ:1ನೇ ಡಿಸೆಂಬರ್, 2007**

**ವಿಷಯ:** ಶ್ರೀಮತಿ ಬಿ. ಜಯಮ್ಮ, ಗ್ರೂಪ್ ಡಿ. ನೌಕರರು, ಸ.ಪ.ಪೂ. ಕಾಲೇಜು, ಬೆಳ್ಳಾವಿ, ತುಮಕೂರು ತಾಲ್ಲೂಕು ಇವರ ಅನಧಿಕೃತ ಗೈರು ಹಾಜರಿಯ ಬಗ್ಗೆ.

**ಉಲ್ಲೇಖ:** 1) ಪ್ರಾಂಶುಪಾಲರು, ಸ.ಪ.ಪೂ. ಕಾಲೇಜು, ಬೆಳ್ಳಾವಿ, ತುಮಕೂರು ತಾಲ್ಲೂಕು ಇವರ ಪತ್ರದ ದಿನಾಂಕ:01.01.2005.

2) ಈ ಕಛೇರಿಯ ಜ್ಞಾಪನ ಸಂಖ್ಯೆ: ಇ5 ಅ.ಗೈ.ಹಾ 59/ 2004-05 ದಿನಾಂಕ:17.08.2005ರಲ್ಲಿ ಆರೋಪ ಪಟ್ಟಿ ಜಾರಿ ಮಾಡಿರುವುದು.

3) ಈ ಕಛೇರಿಯ ಸಮಪತ್ರದ ಸಂಖ್ಯೆ: ಇ5 ಅ.ಗೈ.ಹಾ 59/ 2004-05 ದಿನಾಂಕ:30.01.2006ರಲ್ಲಿ ವಿಚಾರಣಾಧಿಕಾರಿಗಳ ನೇಮಕ.

4) ವಿಚಾರಣಾಧಿಕಾರಿಗಳ ವರದಿ ದಿನಾಂಕ:09.06.2006.

5) ಈ ಕಛೇರಿಯ ಅಂತಿಮ ನೋಟೀಸ್ ದಿನಾಂಕ:05.08.2006, 10.11.2006, 27.01.2007.

6) ಶ್ರೀಮತಿ ಬಿ. ಜಯಮ್ಮ, ಗ್ರೂಪ್ ಡಿ, ನೌಕರರು ಇವರ ರಕ್ಷಣಾ ಹೇಳಿಕೆ ದಿನಾಂಕ:18.11.2006 ಮತ್ತು 11.01.2007.

7) ದಿನಾಂಕ:01.09.2007ರಂದು ಉದಯವಾಣಿ ದಿನಪತ್ರಿಕೆಯಲ್ಲಿ ಪ್ರಕಟಿಸಿರುವ ಪ್ರಕಟಣೆಯ ಪ್ರಕಾರ.

8) ಸರ್ಕಾರಿ ಸುತ್ತೋಲೆ ಸಂಖ್ಯೆ: ಸಿ.ಆ.ಸಂ.ಇ.ಅ.ಸೇ.ಇ.ನಿ. 2001 ದಿನಾಂಕ:14.09.2001.

ಶ್ರೀಮತಿ ಜಯಮ್ಮ, ಗ್ರೂಪ್ ಡಿ. ನೌಕರರು, ಸರ್ಕಾರಿ ಪ.ಪೂ. ಕಾಲೇಜು, ಬೆಳ್ಳಾವಿ, ತುಮಕೂರು ತಾಲ್ಲೂಕು ಆದ ಇವರು ದಿನಾಂಕ:01.01.1990 ರಂದು ಸಂಖ್ಯೆ ರೀತ್ಯಾ ಡಿ. ಗ್ರೂಪ್ ಹುದ್ದೆಯಲ್ಲಿ ರೇಷ್ಮೆ ಕೃಷಿ ವಿಸ್ತರಣಾಧಿಕಾರಿಗಳ ಕಛೇರಿ, ಬಿಳಿದೇವಾಲಯ, ಕುಣಿಗಲ್ ಇಲ್ಲಿ ನೇಮಕಗೊಂಡು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ತದನಂತರ ಉಪನಿರ್ದೇಶಕರು, ಸಾ.ಶಿ. ಇಲಾಖೆ, ತುಮಕೂರು (ದ) ಇವರ ಪತ್ರದ ಸಂಖ್ಯೆ:ಇ1 ಗ್ರೂಪ್ ಡಿ, ನೇ 86/1995-96 ದಿನಾಂಕ:16.07.2003ರ ಪ್ರಕಾರ ಸರ್ಕಾರಿ ಪ.ಪೂ. ಕಾಲೇಜು, ಬೆಳ್ಳಾವಿ, ತುಮಕೂರು ತಾಲ್ಲೂಕು ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ.

ಈ ನೌಕರರು ದಿನಾಂಕ:01.01.2005 ರಿಂದ ಈ ದಿನಾಂಕದವರೆಗೆ ಶಾಲಾ ಕೆಲಸಕ್ಕೆ ಗೈರು ಹಾಜರಾಗಿರುತ್ತಾರೆ. ಗೈರು ಹಾಜರಿಯ ಬಗ್ಗೆ ಕೆ.ಸಿ.ಎಸ್. (ಸಿ.ಸಿ.ಎ.) ನಿಯಮಾವಳಿ 1957 ನಿಯಮ 11ರಂತೆ ಶಿಸ್ತು ಕ್ರಮ ಜರುಗಿಸಲು ಉದ್ದೇಶಿಸಿ ದೋಷಾರೋಪ ಪಟ್ಟಿಯನ್ನು ಜಾರಿಗೊಳಿಸಿದ್ದು, ಆರೋಪಿ ನೌಕರರು ರಕ್ಷಣಾ ಹೇಳಿಕೆಯನ್ನು ನೀಡದೆ ಇರುವುದರಿಂದ ಸತ್ಯಾಸತ್ಯತೆಯನ್ನು ತಿಳಿಯಲು ಉಲ್ಲೇಖ (3) ರಲ್ಲಿ ಶ್ರೀ ಕೆ.ಜಿ. ರಾಜೇಂದ್ರ, ಶಿಕ್ಷಣಾಧಿಕಾರಿಗಳು, ಉಪನಿರ್ದೇಶಕರ ಕಛೇರಿ, ತುಮಕೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ಶ್ರೀ ಶೂಲಯ್ಯ, ವಿಷಯ ಪರಿವೀಕ್ಷಕರು, ಉಪನಿರ್ದೇಶಕರ ಕಛೇರಿ, ತುಮಕೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿ ಈ ಪ್ರಕರಣ ವಿಚಾರಣೆ ನಡೆಸಿ ವರದಿಯನ್ನು ನೀಡುವಂತೆ ತಿಳಿಸಲಾಗಿತ್ತು.

**ಆರೋಪ 1:**

ಶ್ರೀಮತಿ ಬಿ. ಜಯಮ್ಮ ಡಿ. ದರ್ಜೆ ನೌಕರರು, ಸರ್ಕಾರಿ ಪ.ಪೂ. ಕಾಲೇಜು, ಬೆಳ್ಳಾವಿ, ಆದ ಇವರು ದಿನಾಂಕ:01.01.2005 ರಿಂದ ಈ ದಿನಾಂಕದವರೆಗೆ ಗೈರು ಹಾಜರಾಗಿರುವುದು ಹಾಗೂ ದಿನಾಂಕ:31.12.2004 ರವರೆಗೆ 595 ದಿನಗಳು ಅನಧಿಕೃತವಾಗಿ ಗೈರು ಹಾಜರು ಆಗಿರುತ್ತಾರೆ ಹಾಗೂ ದಿನಾಂಕ:03.05.2005ರಂದು ಈ ಕಛೇರಿಯಿಂದ ನೀಡಿರುವ ಕಾರಣ ಕೇಳುವ ನೋಟಿಸ್‌ಗೆ ಉತ್ತರಿಸದೆ ಬೇಜವಾಬ್ದಾರಿತನದಿಂದ ವರ್ತಿಸಿರುವುದು.

ವಿಚಾರಣಾಧಿಕಾರಿಗಳು ಈ ಪ್ರಕರಣದ ಬಗ್ಗೆ ವಿಚಾರಣೆ ನಡೆಸಿ ವರದಿಯನ್ನು ಉಲ್ಲೇಖ (4) ರಲ್ಲಿ ನೀಡುತ್ತಾ ವಿಚಾರಣೆಗೆ ಹಾಜರಾಗುವಂತೆ ದಿನಾಂಕ:14.03.2006, 18.04.2006 ಮತ್ತು 27.04.2006 ರಂದು 3 ನೋಟೀಸ್‌ಗಳನ್ನು ನೊಂದಣಿ ಅಂಚೆ ಮೂಲಕ ಕಳುಹಿಸಲಾಗಿದ್ದು, ವಿಚಾರಣೆಗೆ ಗೈರು ಹಾಜರಾಗಿರುವುದರಿಂದ, ಆರೋಪಿ ನೌಕರರ ಶಾಲಾ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಿ ಆಗಿರುವ ಆರೋಪ ಸಾಬೀತಾಗಿದ್ದು ದೃಢಪಟ್ಟಿರುತ್ತದೆ ಎಂದು ವರದಿ ನೀಡಿರುವುದನ್ನು ಒಪ್ಪಲಾಗಿದೆ.

ಸದರಿ ವಿಚಾರಣಾ ವರದಿಯನ್ನು ಆಧರಿಸಿ ಆರೋಪದ ಬಗ್ಗೆ ಆಪಾದಿತ ನೌಕರರಿಗೆ ಉಲ್ಲೇಖ (5)ರ ಪತ್ರದ ದಿನಾಂಕ:10.11.2006 ಮತ್ತು 27.01.2007ರಲ್ಲಿ ಲಿಖಿತ ವಿವರಣೆ ನೀಡಲು ತಿಳಿಸಲಾಗಿತ್ತು. ಆರೋಪಿ ನೌಕರರು ಉಲ್ಲೇಖ

(6) ರಲ್ಲಿ ಮನವಿ ಸಲ್ಲಿಸಿ ಗೈರು ಹಾಜರಿಯ ಬಗ್ಗೆ ಯಾವುದೇ ಸಮಂಜಸವಾದ ಹೇಳಿಕೆ ನೀಡದೆ, ಸ್ವ ಇಚ್ಛ ನಿವೃತ್ತಿ ಹೊಂದಲು ಅನುಮತಿ ನೀಡಲು ಕೋರಿರುತ್ತಾರೆ. ಇವರ ಹೇಳಿಕೆಯನ್ನು ಪರಿಗಣಿಸಲಾಗಿರುವುದಿಲ್ಲ.

ದಿನಾಂಕ:01.09.2007ರಂದು ಉದಯವಾಣಿ ದಿನಪತ್ರಿಕೆಯಲ್ಲಿ ಶಾಲಾ ಕರ್ತವ್ಯಕ್ಕೆ ಹಾಜರಾಗುವಂತೆ ಪತ್ರಿಕಾ ಪ್ರಕಟಣೆ ನೀಡಲಾಗಿದೆ. ಆದರೆ, ಈ ನೌಕರರು ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ ಎಂದು ಪ್ರಾಂಶುಪಾಲರು, ಸ.ಪ.ಪೂ.ಕಾಲೇಜು, ಬೆಳ್ಳಾವಿ, ತುಮಕೂರು ತಾಲ್ಲೂಕು ಇವರು ವರದಿ ಮಾಡಿರುತ್ತಾರೆ.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಆಪಾದಿತ ನೌಕರರ ವಿರುದ್ಧ ನೀಡಲಾಗಿರುವ ವಿಚಾರಣಾಧಿಕಾರಿಗಳ ವಿಚಾರಣಾ ವರದಿ, ಆಪಾದಿತ ನೌಕರರ ಲಿಖಿತ ಹೇಳಿಕೆಗಳು ಮತ್ತು ಪ್ರಕರಣಕ್ಕೆ ಸಂಬಂಧಪಟ್ಟ ಎಲ್ಲಾ ದಾಖಲಾತಿಗಳನ್ನು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಇ5: ಅ.ಗೈ.ಹಾ 59/ 2004–05, ದಿನಾಂಕ:1ನೇ ಡಿಸೆಂಬರ್, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಶ್ರೀಮತಿ ಬಿ. ಜಯಮ್ಮ, ಗ್ರೂಪ್ ಡಿ. ನೌಕರರು, ಸ.ಪ.ಪೂ. ಕಾಲೇಜು, ಬೆಳ್ಳಾವಿ, ತುಮಕೂರು ತಾಲ್ಲೂಕು ಇವರ ಮೇಲಿನ ಅನಧಿಕೃತ ಗೈರು ಹಾಜರಿ ಆಪಾದನೆಯು ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ ಶ್ರೀ ಬಿ.ಎ. ರಾಜಶೇಖರ, ಉಪನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳು, ಸಾ.ಶಿ. ಇಲಾಖೆ, ತುಮಕೂರು ಆದ ನಾನು ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮ 1957ರಂತೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಕೆ.ಸಿ.ಎಸ್. (ಸಿ.ಸಿ.ಎ.) ನಿಯಮ 8 (viii) ರ ಪ್ರಕಾರ ಸೇವೆಯಿಂದ ವಜಾ ಮಾಡಿ ಆದೇಶಿಸಿದ್ದೇನೆ.

ಸಂಬಂಧಿಸಿದ ಪ್ರಾಂಶುಪಾಲರು ಈ ಆದೇಶವನ್ನು ನೌಕರರ ಸೇವಾ ವಹಿಯಲ್ಲಿ ನಮೂದಿಸಿ ಮೇಲಿನ ಆದೇಶದಂತೆ ನಿಯಮಾನುಸಾರ ಅಗತ್ಯ ಕ್ರಮ ಕೈಗೊಳ್ಳಲು ತಿಳಿಸಿದೆ.

**ಬಿ.ಎ. ರಾಜಶೇಖರ**

ಪಿ.ಆರ್.1588

ಉಪನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳು,
ಸಾ.ಶಿ. ಇಲಾಖೆ, ತುಮಕೂರು (ದ) ಜಿಲ್ಲೆ.

## COMMERCIAL TAXES DEPARTMENT

## PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003

**Sub:** KVAT Act, 2003 -Clarification under Section 59(4) regarding the rate of tax applicable on the transfer of the right to use of electric generating sets.

**Ref:** Application Dated:12.10.2007 of Sri B.C. Kantharaju, Partner, M/s K.R. Generators, No.16/3, Krishna Layout, Devarachikkanahalli, Bangalore-560 076.

In his application cited at reference above, the applicant has sought clarification regarding the rate of tax applicable on the transfer of the right to use of electric generating sets.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purposes of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO. CLR.CR. 205/ 07-08, DATED:27TH NOVEMBER, 2007**

It is hereby clarified that

| | | |
|---|---|---|
| i) | Transfer of the right to use electric generating sets and rotary converters with a capacity of 15 KVA and above falling under heading/ sub heading 8502 of CET Act. | Taxable @ 4% under entry 35 of notification No.FD 316 CSL 2005 (I), Dated:05.08.2005. |
| ii) | Transfer of the right to use generating sets and rotary converters other than those mentioned at (1) above. | Taxable @ 12.5% under Section 4(1) (b) of the Karnataka Value Added Tax Act, 2003. |

**B.A. HARISH GOWDA**

PR-1593

Commissioner of Commercial Taxes,
(Karnataka), Bangalore.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act, 2003 -Clarification under Section 59(4) regarding the rate of tax applicable on various types of 'insulated copper and aluminum strip/ wires, winding wires and kapton polyimide film covered heat bonded copper strips/ wires'.

**Ref:** Application Dated:17.08.2007 M/s Pearl Insulations Pvt. Ltd., Plot No.505 to 507, IV Phase, Peenya Industrial Area, Bangalore-560 058.

In its application Dated:20.09.2007 cited above, M/s Pearl Insulations Pvt. Ltd., Plot No.505 to 507, IV Phase, Peenya Industrial Area, Bangalore-560 058 has sought clarification regarding the rate of tax applicable on 'insulated copper and aluminum strip/ wires, winding wires and kapton polyimide film covered heat bonded copper strips/ wires'.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO. CLR.CR. 151/ 07-08, DATED:27TH NOVEMBER, 2007**

It is hereby clarified that 'insulated copper and aluminum strip/ wires, winding wires and kapton polyimide film covered heat bonded copper strips/ wires' are taxable at 12.5% under Section 4(1) (b) of the Karnataka Value Added Tax Act, 2003.

**B.A. HARISH GOWDA**

PR-1594

Commissioner of Commercial Taxes,
(Karnataka), Bangalore.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act, 2003 -Clarification under Section 59(4) regarding the rate of tax applicable on 'piston rings'.

**Ref:** Application Dated:20.09.2007 M/s Shriram Pistons and Rings Ltd., No.28, 3rd Cross, Lalbagh Road, Bangalore-560 027.

In its application Dated:20.09.2007 of cited above, M/s Shriram Pistons and Rings Ltd., No.28, 3rd Cross, Lalbagh Road, Bangalore-560 027 has sought clarification regarding the rate of tax applicable on 'piston rings'.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO. CLR.CR. 166/ 07-08, DATED:27TH NOVEMBER, 2007**

It is hereby clarified that 'piston rings' are parts of motor vehicles and are taxable at 12.5% under Section 4(1) (b) of the Karnataka Value Added Tax Act, 2003.

**B.A. HARISH GOWDA**

PR-1595

Commissioner of Commercial Taxes,
(Karnataka), Bangalore.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪ ನಿಬಂಧಕರವರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿಯ ನಡವಳಿಗಳು

**ವಿಷಯ:** ಸಮಾಪನೆಗೊಂಡಿರುವ ಅನಂತನಹಳ್ಳಿ ಸಂಯುಕ್ತ ಬೇಸಾಯ ಸಹಕಾರ ಸಂಘ ನಿ., ಅನಂತನಹಳ್ಳಿ, ಹರಪನಹಳ್ಳಿ ತಾಲ್ಲೂಕು ಇದರ ನೋಂದಣಿಯನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:**1) ಈ ಕಛೇರಿ ಸಮ ಸಂಖ್ಯೆ: ಆದೇಶ ದಿನಾಂಕ:30.03.2002.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಉಪವಿಭಾಗ, ಹರಪನಹಳ್ಳಿ ರವರು ಸಲ್ಲಿಸಿರುವ ಪ್ರಸ್ತಾವೆ ದಿನಾಂಕ:21.11.2007.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ನೋಂದಣಿ ಸಂಖ್ಯೆ: ವಿಆರ್‌ಹೆಚ್. 23/1221/1968-69, ದಿನಾಂಕ:18.01.1969 ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು. ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ, ಹರಪನಹಳ್ಳಿ, ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಉಲ್ಲೇಖ (2)ರ ರೀತ್ಯಾ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರ ಮುಖಾಂತರ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

### ಆದೇಶ

**ಸಂಖ್ಯೆ: ಡಿಆರ್. ಡಿವಿಜಿ: ಎಲ್‌ಕ್ಯೂಡಿ: ಸಿಆರ್-06: 2000-01, ದಿನಾಂಕ:14ನೇ ಡಿಸೆಂಬರ್, 2007**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69: ಸಿಎಲ್‌ಎಂ: 2001, ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ. ಕುಬೇರಪ್ಪ, ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ಅನಂತನಹಳ್ಳಿ ಸಂಯುಕ್ತ ಬೇಸಾಯ ಸಹಕಾರ ಸಂಘ ನಿ., ಅನಂತನಹಳ್ಳಿ, ಹರಪನಹಳ್ಳಿ-ತಾಲ್ಲೂಕ್ ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33 (ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಉಪವಿಭಾಗ, ಹರಪನಹಳ್ಳಿ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:14.12.2007 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.1596

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ ತುಮಕೂರು ಜಿಲ್ಲೆ, ತುಮಕೂರು

**ಸಂಖ್ಯೆ: ಕಾಅತು: ಕಾಪಕಾ: ಸಿಆರ್-95/ 07, ದಿನಾಂಕ:23ನೇ ನವೆಂಬರ್, 2007**

| ಅರ್ಜಿದಾರರು: | ಪ್ರತಿವಾದಿಗಳು: |
|---|---|
| ಶಿವನಂಜಯ್ಯ @ ಸೋಮಶೇಖರ್ ತಂದೆ: ಹುಚ್ಚೇಗೌಡ- ಮತ್ತಿತರರು | 1) ಪಾಂಡುರಂಗಪ್ಪ ತಂದೆ: ಹನುಮಂತಯ್ಯ ದೇವರಾಯಪಟ್ಟಣ, ತುಮಕೂರು ಟೌನ್.<br>2) ಯುನೈಟೆಡ್ ಇಂಡಿಯಾ ಇನ್‌ಶ್ಯೂರೆನ್ಸ್ ಕಂ.ಲಿ., ಪೀಣ್ಯ ಬೆಂಗಳೂರು. |

### ಪ್ರಕಟಣೆ

ಅರ್ಜಿದಾರರ ಮಗನಾದ ಮಂಜುನಾಥ ಇವರು 1ನೇ ಪ್ರತಿವಾದಿ ಟಾಟಾಸುಮೋ ಸಂಖ್ಯೆ: ಕೆಎ-27-3890 ಟಾಟಾಸುಮೋ ಕಾರಿನಲ್ಲಿ ಡ್ರೈವರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:20.12.2006 ರಂದು ದೊಡ್ಡಶೆಟ್ಟಿಕೆರೆ ವಿಲೇಜ್ ಮಾಯಸಂದ್ರ ಬೆಳ್ಳೂರು ರೋಡ್ ತುರುವೇಕೆರೆ ತಾ: ಹತ್ತಿರ ಆದ ಅಪಘಾತದಿಂದಾದ ಗಾಯಗಳ ಪರಿಣಾಮವಾಗಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಅಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ತುಮಕೂರು ಜಿಲ್ಲೆ, ತುಮಕೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ ತುಮಕೂರು ಜಿಲ್ಲೆ, ತುಮಕೂರು**
**ಸಂಖ್ಯೆ: ಕಾಅತು: ಕಾಪಕಾ: ಸಿಆರ್–96/ 07, ದಿನಾಂಕ:23ನೇ ನವೆಂಬರ್, 2007**

**ಅರ್ಜಿದಾರರು:**
ಮೊಹ್ಮದ್ ಅನ್ವರ್
ತಂದೆ: ಮೊಹ್ಮದ್ ಸಾಬ್, ಮತ್ತಿತರರು

**ಪ್ರತಿವಾದಿಗಳು:**
1) ಬಾಬಾಜಾನ್ ತಂದೆ: ಖಾಸಿಮ್ ಸಾಬಿ ಬೊಮ್ಮಣ್ಣ ಹಳ್ಳಿ, ಮಡಿವಾಳ, ಬೆಂಗಳೂರು–68.
2) ಯುನೈಟೆಡ್ ಇಂಡಿಯಾ ಇನ್‌ಶ್ಯೂರನ್ಸ್ ಕಂ.ಲಿ., 1ನೇ ಫ್ಲೋರ್ ಹೊಸೂರು, ಮಡಿವಾಳ, ಬೆಂಗಳೂರು.

**ಪ್ರಕಟಣೆ**

ಅರ್ಜಿದಾರರ ಮಗನಾದ ಮೆಹಬೂಬಪಾಶಾ ಇವರು 1ನೇ ಪ್ರತಿವಾದಿ ಲಾರಿ ಸಂಖ್ಯೆ: ಸಿಎನ್‌ಜೆ–3335 ಲಾರಿಯಲ್ಲಿ ಡ್ರೈವರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:25.09.2006 ರಂದು ಇನ್ನೊಬ್ಬ ಚಾಲಕ ಇಬ್ರಾಹೀಂ ಲಾರಿ ಅತೀವೇಗವಾಗಿ ಹಾಗೂ ಅಜಾಗರೂಕತೆಯಿಂದ ಓಡಿಸಿ ಅಪಘಾತ ಮಾಡಿದ ಪರಿಣಾಮವಾಗಿ ಮೆಹಬೂಬಪಾಷಾ ಅವರಿಗೆ ತೀವ್ರತರವಾದ ಗಾಯಗಳಾದ ಪರಿಣಾಮವಾಗಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಅಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ತುಮಕೂರು ಜಿಲ್ಲೆ, ತುಮಕೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ ತುಮಕೂರು ಜಿಲ್ಲೆ, ತುಮಕೂರು**
**ಸಂಖ್ಯೆ: ಕಾಅತು: ಕಾಪಕಾ: ಸಿಆರ್–98/ 07, ದಿನಾಂಕ:23ನೇ ನವೆಂಬರ್, 2007**

**ಅರ್ಜಿದಾರರು:**
ಕುಪ್ಪುಸ್ವಾಮಿ ತಂದೆ: ನಾರಾಯಣಪ್ಪ– ಮತ್ತಿತರರು

**ಪ್ರತಿವಾದಿಗಳು:**
1) ರಾಜಮ್ಮ ವೈಫ್ ಆಫ್ ನರಸಿಂಹಯ್ಯ ನಂ.181, ಉಂಡಿಗನಾಳ, ಅರಸಿಕೆರೆ ತಾ: ಹಾಸನ ಜಿಲ್ಲೆ.
2) ಓರಿಯೆಂಟಲ್ ಇನ್‌ಶ್ಯೂರೆನ್ಸ್ ಕಂ.ಲಿ., ಹಾಸನ.

**ಪ್ರಕಟಣೆ**

ಅರ್ಜಿದಾರರ ಮಗನಾದ ಇಬ್ರಾಹೀಮ್ @ ಇಬ್ರಾಹೀಂ ಅನ್ಸಾರಿ ಇವರು 1ನೇ ಪ್ರತಿವಾದಿ ಲಾರಿ ಸಂಖ್ಯೆ: ಎನ್‌ಎಲ್–2ಡಿ–1940 ಲಾರಿಯಲ್ಲಿ ಕ್ಲೀನರ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:29.04.2003 ರಂದು ರಿಂಗ್ ರೋಡ್ ಜಯನಗರ ಈಸ್ಟ್ ತುಮಕೂರು ಹತ್ತಿರ ಆದ ಅಪಘಾತದಿಂದ ಗಾಯಗಳ ಪರಿಣಾಮವಾಗಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಅಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ

